ಸಂ. 3–3

# ಅನಿಕೇತನ

(ಅನುವಾದ ಸಾಹಿತ್ಯಕ್ಕೆ ಮೀಸಲಾದ ತ್ರೈಮಾಸಿಕ)

ಈ ಸಂಚಿಕೆಯಲ್ಲಿ :

ಚಿನುವಾ ಅಚೇಬೆ ○ ಶೋಭಾ ವಾರಿಯರ್
ಕರೋಲಿ ಕಿಸ್‌ಫಲೂದಿ ○ ಜೋಸೆಫ್ ಎಪ್‌ಸ್ಟೈನ್
ಜಯಕಾಂತನ್ ○ ಶಿವಾರೆಡ್ಡಿ ○ ಅಕ್ಟೋವಿಯೊ ಪಾಜ್
ಜಾರ್ಜ್ ಶಾಂತಾಯನ ○ ಬ್ರೆಕ್ಟ್



ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು

ಸಂ. 3-3
ಅಕ್ಟೋಬರ್ 1990–ಡಿಸೆಂಬರ್ 1990

# ಅನಿಕೇತನ

(ಅನುವಾದ ಸಾಹಿತ್ಯಕ್ಕೆ ಮೀಸಲಾದ ತ್ರೈಮಾಸಿಕ)

ಸಂಪಾದಕರು :

ಬಿ. ವೈ. ಲಲಿತಾಂಬ
ಡಾ. ಆರ್ಯಿಯಸ್. ಸುಂದರಂ
ಡಾ. ಎಚ್. ಎಸ್. ವೆಂಕಟೇಶ ಮೂರ್ತಿ



ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು–560 002

# ಪರಿವಿಡಿ

ಕತೆಗಳು



ಸಂದರ್ಶನ



ಪುರಸ್ಕೃತ ಸಾಹಿತ್ಯ

## ತತ್ವ ಚಿಂತನೆ



## ಭಾಷಾ ಸಾಹಿತ್ಯ

# ಕತೆಗಳು

- ಸತ್ತವರ ಹಾದಿ
- ಸುಮತಿಯ ಬಾಲ್ಯ
- ಕಾಣದ ಗಾಯ
- ಗೋಲ್ಡಿನ್ ಹುಡುಗರು

# ಸತ್ತವರ ಹಾದಿ

ಮೂಲ : ಚಿನುವ ಅಚೀಬೆ
ಕನ್ನಡಕ್ಕೆ : ನಟರಾಜ್ ಹುಳಿಯಾರ್

ಮೈಕೆಲ್ ಓಬಿಯ ಕನಸುಗಳು ಅವನು ಎಣಿಸಿದ್ದಕ್ಕಿಂತ ಬೇಗ ಕೈಗೂಡಿಬಿಟ್ಟವು. ಚಿಕ್ಕವಯಸ್ಸಿನಲ್ಲೇ, ಅಂದರೆ 1949ರ ಜನವರಿಯಲ್ಲೇ ನುಡುಮೆಯ ಸೆಂಟ್ರಲ್ ಸ್ಕೂಲಿನ ಹೆಡ್‌ಮಾಸ್ತರಾಗಿ ನೇಮಕಗೊಂಡ. ತುಂಬಾ ಹಿಂದುಳಿದ ಸ್ಕೂಲಾದದ್ದರಿಂದ ಅಲ್ಲಿಗೆ ಒಬ್ಬ ಉತ್ಸಾಹಿ ತರುಣನನ್ನೇ ಕಳಿಸಬೇಕೆಂದು ಚರ್ಚಿನ ಆಡಳಿತ ಮಂಡಳಿ ಯವರು ತೀರ್ಮಾನಿಸಿದ್ದರು. ಓಬಿ ಈ ಹೊಸ ಜವಾಬ್ದಾರಿಯನ್ನು ಖುಷಿಯಿಂದಲೇ ಒಪ್ಪಿಕೊಂಡ. ತನ್ನ ತಲೆಯಲ್ಲಿ ಕುಣಿಯುತ್ತಿದ್ದ ಹಲವು ಅದ್ಭುತ ಆಲೋಚನೆಗಳನ್ನು ಕಾರ್ಯರೂಪಕ್ಕೆ ತರಲು ಅವನಿಗೆ ಇದೊಂದು ಸದವಕಾಶವಾಗಿತ್ತು. ಸೆಕೆಂಡರಿ ಶಿಕ್ಷಣ ದಲ್ಲಿ ಅವನು ಪಡೆದಿದ್ದ ಸರ್ಟಿಫಿಕೇಟುಗಳೇ ಅವನನ್ನು 'ಮಾದರಿ ಶಿಕ್ಷಕ' ಎಂದು ಗುರುತಿಸಿದ್ದವು. ಹೀಗಾಗಿಯೇ ಅವನು ಇತರ ಹೆಡ್‌ಮಾಸ್ತರುಗಳಿಗಿಂತ ಭಿನ್ನವಾದದ್ದು. ಹಳೆಯ ತಲೆಗಳ, ಅನಕ್ಷರಸ್ಥರ ಬುಡವಿಲ್ಲದ ನಂಬಿಕೆಗಳನ್ನು ಟೀಕಿಸುವುದರಲ್ಲಿ ಅವನು ಸದಾ ಮುಂದು.

"ನಾವು ಅದ್ಭುತವಾದ ಕೆಲಸ ಮಾಡಬಹುದು, ಅಲ್ವ" ಅಂದ ಓಬಿ, ರಾತ್ರಿ ತನ್ನ ಹೆಂಡತಿಗೆ ಈ ಒಡ್ಡಿಯ ವಿಷಯ ತಿಳಿಸುತ್ತಾ.

"ನಮ್ಮ ಶಕ್ತಿ ಮೀರಿ ಕೆಲಸ ಮಾಡೋಣ.... ಅಲ್ಲಿ ಸುಂದರವಾದ ತೋಟ ಗಳಿರುತ್ತೆ, ಎಲ್ಲ ಮಾಡ್ರನ್ನಾಗಿರುತ್ತೆ, ಖುಷಿಯಾಗಿರಬಹುದು...." ಎನ್ನುತ್ತಾ ಅರಳಿ ದ್ದಳು ಓಬಿಯ ಹೆಂಡತಿ. ಈ ಎರಡು ವರ್ಷಗಳ ಅವರ ದಾಂಪತ್ಯದಲ್ಲಿ ಓಬಿಯ ಹೊಸ ಆಲೋಚನೆಗಳ ಅಮಲು ಅವಳಿಗೂ ಏರಿತ್ತು. ಒನಿಶಾ ಮಾರ್ಕೆಟ್ಟಿನಲ್ಲಿ ವ್ಯಾಪಾರಿಗಳಾಗಲು ಮಾತ್ರ ಲಾಯಕ್ಕಾಗಿರುವ ಹಳೆಯ ಕಾಲದ ಮೇಷ್ಟ್ರುಗಳ ಬಗೆಗೆ ಓಬಿಗಿದ್ದಷ್ಟೇ ತಿರಸ್ಕಾರ ಅವಳಿಗೂ ಇತ್ತು. ಅವಳಾಗಲೇ ನೆರೆಹೊರೆಯವರೆಲ್ಲ ಮೆಚ್ಚುವ ಹೆಡ್‌ಮಾಸ್ತರನ ಹೆಂಡತಿಯಾಗಿ, ಸ್ಕೂಲಿನ ರಾಣಿಯಾಗಿ ತನ್ನನ್ನು ತಾನು ಚಿತ್ರಿಸಿಕೊಳ್ಳತೊಡಗಿದ್ದಳು. ಅವಳು ಎಲ್ಲದರಲ್ಲೂ ಹೊಸತನ್ನು ತರುತ್ತಾಳೆ...

ಇತರೇ ಮೇಷ್ಟರ ಹೆಂಡತಿಯರು ಇವಳನ್ನು ಕಂಡರೆ ಹೊಟ್ಟೆಯುರಿ ಪಡುತ್ತಾರೆ.... ಆದರೆ ಥಟ್ಟನೆ ಅನುಮಾನವೊಂದು ಸುಳಿಯಿತು.... ಇತರೇ ಮೇಷ್ಟರಿಗೆ ಇನ್ನೂ ಮದುವೆಯೇ ಆಗದಿದ್ದರೆ.... ಹೆಂಡತಿಯರೇ ಇ....ರ....ದಿ....ದ್ದ....ರೆ.... ಭರವಸೆ ಹಾಗೂ ಅನುಮಾನಗಳ ನಡುವೆ ಹೊಯ್ದಾಡುತ್ತಾ ಅವಳು ತನ್ನ ಭಯವನ್ನು ತನ್ನ ಗಂಡನಲ್ಲಿ ತೋಡಿಕೊಂಡೇ ಬಿಟ್ಟಳು.

"....ನಮ್ಮ ಜೊತೇಲಿ ಕೆಲಸ ಮಾಡುವ ಮೇಷ್ಟರುಗಳೆಲ್ಲ ಯುವಕರು... ಇನ್ನೂ ಯಾರಿಗೂ ಮದುವೆ ಆಗಿಲ್ಲ...." ಅವನು ಉತ್ಸಾಹದಿಂದ ಆರಂಭಿಸಿದ. ಇವಳು ಆ ಉತ್ಸಾಹದಲ್ಲಿ ಭಾಗಿಯಾಗುವ ಸ್ಥಿತಿಯಲ್ಲಿರಲಿಲ್ಲ. ಇವಳ ಚಿಂತೆಯನ್ನು ಗಮನಿಸದೆ ಅವನು ಮುಂದುವರಿಸಿದ "....ಒಂದು ವಿಧದಲ್ಲಿ ಅದೇ ಒಳ್ಳೇದು...."

"ಯಾಕೆ ?"

"ಯಾಕೇಂದ್ರೆ... ತಮ್ಮೆಲ್ಲಾ ಸಮಯ ಹಾಗೂ ಶಕ್ತಿಯನ್ನ ಸ್ಕೂಲಿಗೇ ಮೀಸಲಿಡ್ತಾರೆ..."

ನ್ಯಾನ್ಸಿ ಖಿನ್ನಳಾಗಿಬಿಟ್ಟಳು. ಹೊಸ ಸ್ಕೂಲಿನ ಬಗೆಗೆ ಅನುಮಾನ ಕೂಡ ಶುರುವಾಯಿತು. ಆದರೆ ಆ ಅನುಮಾನ ಒಂದೆರಡು ಗಳಿಗೆ ಮಾತ್ರ. ಒಂದು ಸಣ್ಣ ಐಬಿನಿಂದಾಗಿ ತನ್ನ ಗಂಡ ಮೇಲೆ ಬರುವ ಈ ಅವಕಾಶವನ್ನು ಕಾಲಿನಿಂದೊದೆಯಲು ಅವಳು ಸಿದ್ಧಳಿರಲಿಲ್ಲ. ಮಾತಾಡದೇ ಕುರ್ಚಿಗೊರಗುತ್ತಾ ಅವನನ್ನೇ ದಿಟ್ಟಿಸಿದಳು. ನೋಡಲು ತೆಳ್ಳಗಿದ್ದ ಅವನು ಹೊಡೆದಾಟಕ್ಕಿಳಿದರೆ ಎಂಥವರನ್ನೂ ಬೆಚ್ಚಿಸಿಬಿಡುತ್ತಿದ್ದ. ಅವನ ಮೈಯ ಕಸುವೆಲ್ಲ, ಆಳಕ್ಕಿಳಿದ ಅವನ ಕಣ್ಣುಗಳಲ್ಲಿದ್ದಂತೆ ತೋರುತ್ತಿತ್ತು. ಆ ಕಸುವೇ ಆ ಒಂದು ಜೊತೆ ಕಣ್ಣುಗಳಿಗೆ ಸೀಳುವ ಗುಣವನ್ನು ಕೊಟ್ಟಂತೆ ಕಾಣುತ್ತಿತ್ತು. ಬರೇ ಇಪ್ಪತ್ತಾರಕ್ಕೇ ಮೂವತ್ತು ದಾಟಿದವನಂತೆ ಕಾಣುತ್ತಿದ್ದ. ತೀರಾ ಸುಂದರನಲ್ಲದಿದ್ದರೂ ನೋಡಲು ಲಕ್ಷಣವಾಗಿದ್ದ.

"ಏನು ಯೋಚ್ನೆ ಮಾಡ್ತಿದೀಯ ?" ನ್ಯಾನ್ಸಿ ಚಣಬಿಟ್ಟು ಕೇಳಿದಳು.

ಅವನು ಕನಸೊಡೆದು ಎದ್ದವನಂತೆ, "ಒಂದು ಸ್ಕೂಲನ್ನ ಯಾವ ಥರ ನಡೆಸಬೇಕೂಂತ ಈ ಜನಗಳಿಗೆ ತೋರಿಸಕ್ಕೆ ಎಂಥ ಅವಕಾಶ ಅಲ್ವ ?" ಅಂದ.

ಅವನು ಹೆಡ್‌ಮಾಸ್ತರಾಗಲಿದ್ದ ನುಡುಮೆ ಸ್ಕೂಲು ಎಲ್ಲಾ ದೃಷ್ಟಿಯಿಂದಲೂ ಹಿಂದುಳಿದಿತ್ತು. ಹೀಗಾಗಿಯೇ ಅವನು ತನ್ನ ಇಡೀ ಬದುಕನ್ನೇ ಸ್ಕೂಲಿನ ಕೆಲಸಕ್ಕೆ ಮುಡಿಪಾಗಿಟ್ಟ. ಅವನ ಹೆಂಡತಿ ಕೂಡ ಅವನ ಉತ್ಸಾಹದಲ್ಲಿ ಭಾಗಿಯಾಗಿದ್ದಳು. ಅವನ ಕಣ್ಣೆದುರು ಎರಡು ಗುರಿಗಳಿದ್ದವು : ಒಂದು, ಬೋಧನೆಯಲ್ಲಿ ಮೇಲ್ಮಟ್ಟವನ್ನು ತರುವುದು. ಎರಡು, ಸ್ಕೂಲಿನ ಕಾಂಪೌಂಡನ್ನು ಸುಂದರಗೊಳಿಸುವುದು.

ಮಳೆಗಾಲ ಶುರುವಾದಾಗ ನ್ಯಾನ್ಸಿಯ ಕನಸಿನ ತೋಟಗಳು ಅವಳ ಕಣ್ಣೆದುರೇ ಸಾಕಾರಗೊಂಡು ನಳನಳಿಸಿ ನಿಂತವು. ಸ್ಕೂಲಿನ ಹತ್ತಿರವೇ ಸೊಕ್ಕಿ ಬೆಳೆದ ಪೊದೆಗಳಿ

ಗಿಂತ ಭಿನ್ನವಾಗಿ ನಿಂತಿದ್ದ ಸುಂದರವಾದ ದಾಸವಾಳ ಹಾಗೂ ಬಾದಾಮಿ ಮರಗಳ ಬೇಲಿ ಸ್ಕೂಲಿಗೊಂದು ವಿಶೇಷ ಕಳೆ ತಂದುಕೊಟ್ಟಿತ್ತು.

ಒಂದು ಸಂಜೆ ಹೀಗೇ ತನ್ಮಯನಾಗಿ ತನ್ನ ಸಾಧನೆಯನ್ನು ಮೆಲುಕು ಹಾಕುತ್ತಾ ಸ್ಕೂಲಿನೆದುರು ಕೂತ ಓಬಿಗೆ ಹಳ್ಳಿಯ ಮುದುಕಿಯೊಬ್ಬಳು ಕುಂಟುತ್ತಾ ಕುಂಟುತ್ತಾ ಸ್ಕೂಲ್ ಕಾಂಪೌಂಡನ್ನು ಹೊಕ್ಕು ಬೇಲಿ ಬದಿಯ ಹೂಗಿಡಗಳನ್ನು ಹಾದು ಹೊರ ಹೋಗುವುದು ಕಾಣಿಸಿತು. ಓಬಿ ಎದ್ದವನೇ ಹೋಗಿ ನೋಡಿದ. ಹಳ್ಳಿಯಿಂದ ಊರಾಚೆಯ ಮೆಳೆಗೆ ಹೋಗಲು ಅಲ್ಲಿ ಕಾಲುಹಾದಿಯೊಂದು ಇದ್ದದ್ದು ಕಂಡಿತು. ಅಷ್ಟಾಗಿ ಯಾರೂ ಬಳಸದ ಆ ಹಾದಿ ಸ್ಕೂಲ್ ಕಾಂಪೌಂಡಿನ ಮೂಲಕವೇ ಹಾದು ಹೋಗುತ್ತಿತ್ತು. ರಾತ್ರಿಯೆಲ್ಲಾ ಈ ಹಾದಿಯ ಬಗೆಗಿನ ಚಿಂತೆಯೇ ಅವನನ್ನು ಕೊರೆಯ ಲಾರಂಭಿಸಿತು. ಮಾರನೆಯ ಬೆಳಿಗ್ಗೆ ಉಳಿದ ಮೇಷ್ಟ್ರುಗಳು ಬಂದ ತಕ್ಷಣ ವಿಷಯ ಎತ್ತಿದ.

"ಅಲ್ಲಾ, ಆ ಹಳ್ಳೀಜನ ಈ ಕಾಲುಹಾದೀನ ಬಳಸೋಕೆ ಬಿಟ್ಟಿದೀರಲ್ಲ! ಯಾಕೆ ಬಿಟ್ಟಿದೀರಾಂತ ನಂಗಂತೂ ಅರ್ಥ ಆಗ್ತಿಲ್ಲ" ಅಂದ ಓಬಿ, ಅಸಮಾಧಾನದಿಂದ ತಲೆ ಕೊಡವುತ್ತಾ.

ಮೂರು ವರ್ಷದಿಂದ ಅಲ್ಲಿದ್ದ ಮೇಷ್ಟ್ರೊಬ್ಬ ಕ್ಷಮೆ ಕೇಳುವ ಧಾಟಿಯಲ್ಲಿ ಹೇಳಿದ, "ಸಾರ್, ಆ ದಾರಿ ಅವರಿಗೆ ತುಂಬಾ ಮುಖ್ಯವಾದದ್ದು ಅನ್ಸುತ್ತೆ. ಸಾಮಾನ್ಯ ವಾಗಿ ಅದನ್ನ ಬಳಸಲ್ಲ. ಆದ್ರೆ ಹಳ್ಳಿಯಿಂದ ಸೀದಾ ಸ್ಮಶಾನಕ್ಕೆ ಹೋಗೋಕೆ ಇರೋ ದಾರಿ ಅದೇ."

"ಅದಕ್ಕೂ ಸ್ಕೂಲಿಗೂ ಏನ್ರಿ ಸಂಬಂಧ?" ಸಿಡಿಮಿಡಿಗೊಂಡು ಓಬಿ ಕೇಳಿದ.

"ನಂಗೊತ್ತಿಲ್ಲ. ಆದ್ರೆ ಹಿಂದೊಂದ್ಸಲ ಅದನ್ನ ಮುಚ್ಚಬೇಕೂಂತ ಪ್ರಯತ್ನಿಸಿ ದಾಗ ದೊಡ್ಡ ಗಲಾಟೆ ಆಗಿದ್ದು ಮಾತ್ರ ನನಗೆ ನೆನಪಿದೆ...." ಮೇಷ್ಟ್ರು ಹೇಳಿದ.

"ಅದೆಲ್ಲಾ ಹಳೇ ಕಥೆ. ಆದ್ರೆ ಇನ್ಮುಂದೆ ಅದನ್ನ ಯಾರೂ ಬಳಸಕೂಡದು. ಮುಂದಿನ ವಾರ ಇನ್ಸ್‌ಪೆಕ್ಷನ್‌ಗೆ ಬರ್‍ತಾರಲ್ಲ, ಗವರ್ನ್‌ಮೆಂಟ್ ಎಜುಕೇಶನ್ ಆಫೀಸರು ಇದನ್ನ ನೋಡಿದ್ರೆ ಏನಂದ್ಕೋತಾರೆ, ಹೇಳಿ. ಹೀಗೇ ಬಿಟ್ರೆ ಈ ಹಳ್ಳೀಜನ ಕ್ಲಾಸ್ ರೂಮಲ್ಲಿ ದೇವರ ವಿಗ್ರಹ ಇಟ್ಟು ಪೂಜೆ ಮಾಡೋಕೆ ಶುರುಮಾಡಬಹುದು" ಎಂದ ವನೇ ಓಬಿ ಅಲ್ಲಿಂದ ಎದ್ದು ಹೊರಟುಹೋದ.

ಮಾರನೆಯ ದಿನ ಆ ಕಾಲುಹಾದಿ ಸ್ಕೂಲ್ ಕಾಂಪೌಂಡಿನೊಳಕ್ಕೆ ಪ್ರವೇಶಿಸುವ ಜಾಗಕ್ಕೂ ಮತ್ತು ಹೊರಹೋಗುವ ಜಾಗಕ್ಕೂ ದಪ್ಪನಾದ ಗುಂಜುಗಳನ್ನು ನೆಡಿಸಿ ತಂತಿ ಬಿಗಿಸಿ ಓಬಿ ಸಮಾಧಾನದ ನಿಟ್ಟುಸಿರು ಬಿಟ್ಟ.

ಇದೆಲ್ಲ ಆಗಿ ಮೂರು ದಿನ ಕಳೆದ ಮೇಲೆ ಮುದುಕನೊಬ್ಬ ಹೆಡ್‌ಮಾಸ್ತರ್ ಓಬಿಯನ್ನು ಕಾಣಲು ಬಂದ. ಬಂದವನು 'ಅನಿ'ದೇವರ ಪೂಜಾರಿ. ಕೊಂಚ ಬಾಗಿ ನಡೆಯುವ ಮುದುಕ. ಆಗಾಗ ತನ್ನ ಕೈಲಿದ್ದ ಕೋಲನ್ನು ನೆಲಕ್ಕೆ ಕುಟ್ಟುತ್ತಿದ್ದ.

ತನ್ನ ವಾದದಲ್ಲಿ ಹೊಸ ಪಾಯಿಂಟೊಂದು ಬಂದಾಗಲೆಲ್ಲ ಅದನ್ನು ಒತ್ತಿ ಹೇಳುವವನಂತೆ ಆ ಕೋಲನ್ನು ಮತ್ತೆ ಮತ್ತೆ ನೆಲಕ್ಕೆ ಕುಟ್ಟುತ್ತಿದ್ದ.

ಔಪಚಾರಿಕವಾಗಿ ಒಂದೆರಡು ಮಾತಾಡಿದ ನಂತರ ಮುದುಕ ನೇರವಾಗಿ ವಿಷಯಕ್ಕೆ ಬಂದ. "ಎಷ್ಟೋ ಕಾಲದಿಂದ ಇದ್ದ ನಮ್ಮ ಕಾಲುಹಾದೀನ ಮುಚ್ಚಿಸಿ ಬಿಟ್ಟಿದೀರಾಂತನ್ನೋ ಸುದ್ದಿ ಕೇಳ್ದೆ...." ಎಂದು ಮುದುಕ ಆರಂಭಿಸಿದ.

"ನಿಜ, ನಮ್ಮ ಸ್ಕೂಲು ಕಾಂಪೌಂಡನ್ನ ಊರ ಜನ ಎಲ್ಲಾ ಹೈವೇ ಥರ ಮಾಡಿಕೊಳ್ಳೋಕೆ ಬಿಡೋಕಾಗಲ್ಲ," ಓಬಿ ಅಂದ.

ಮುದುಕ ಮೆಲ್ಲಗೆ ತನ್ನ ಕೈಲಿದ್ದ ಕೋಲನ್ನು ಕೆಳಗಿಳಿಸುತ್ತಾ ಹೇಳಿದ, "ನೋಡಪ್ಪಾ ಮಗನೆ.... ಈ ದಾರಿ ನೀನು ಹುಟ್ಟೋದಕ್ಕಿಂತ ಮುಂಚೆ... ನಿಮ್ಮಪ್ಪ ಹುಟ್ಟೋದಕ್ಕಿಂತ ಮುಂಚೆ ಇಲ್ಲಿತ್ತು. ಈ ಹಳ್ಳಿ ಜೀವನ ಒಂಥರಾ ಈ ಹಾದೀ ಮೇಲೇ ಅವಲಂಬಿಸಿದೆ. ಸತ್ತ ನಮ್ಮ ಹಿರೀಕರೆಲ್ಲ ಈ ಹಾದೀಲೇ ನಮ್ಮನ್ನ ನೋಡೋಕೆ ಬರ್ತಾರೆ. ಅದಕ್ಕಿಂತ ಮುಖ್ಯವಾದದ್ದೆಂದರೆ, ಹುಟ್ಟೋ ಮಕ್ಕಳು ತಾಯೀಗರ್ಭಕ್ಕೆ ಬರೋದು ಕೂಡ ಇದೇ ದಾರೀಲಿ..."

ನಸುನಗುತ್ತಾ ಎಲ್ಲವನ್ನು ಕೇಳಿಸಿಕೊಂಡ ಓಬಿ ಕಡೆಗೆ ಹೇಳಿದ, "ಇಂಥ ನಂಬಿಕೆಗಳನ್ನೆಲ್ಲ ತೊಡೆದು ಹಾಕೋದೇ ನಮ್ಮ ಸ್ಕೂಲಿನ ಗುರಿ. ಅಲ್ಲಾ, ಸತ್ತವರಿಗೆ ಫುಟ್ ಪಾತಾದರೂ ಯಾಕೆ ಬೇಕೂಂತೀನಿ! ಈ ಇಡೀ ನಂಬಿಕೇನೇ ವಿಚಿತ್ರವಾಗಿದೆ. ಇಂಥ ಕೆಲಸಕ್ಕೆ ಬಾರದ ನಂಬಿಕೆಗಳನ್ನ ತಮಾಷೆ ಮಾಡಿ ನಗ್ಬೇಕು ಅಂತ ನಮ್ಮ ಹುಡುಗರಿಗೆ ಹೇಳಿ ಕೊಡ್ತೀವಿ, ಅಂಥದ್ದರಲ್ಲಿ...."

ಮುದುಕ ಬಾಯಿ ಹಾಕಿದ, "ನೀವು ಹೇಳೋದು ನಿಜ ಇರಬಹುದು, ಆದ್ರೆ ನಾವು ಮಾತ್ರ ನಮ್ಮ ಹಿರೀಕರ ದಾರೀಲೇ ಹೋಗ್ತೀವಿ. ಈಗ ಮುಚ್ಚಿರೋ ದಾರೀನ ಮತ್ತೆ ತೆರೆಸಿಬಿಟ್ರೆ ಸಾಕು, ನಮಗೂ ನಿಮಗೂ ಜಗಳಾನೇ ಇರಲ್ಲ. ನಾನು ಯಾವಾಗ್ಲೂ ಹೇಳೋದು ಏನಪ್ಪಾ ಅಂದರೆ.... ಗಿಡುಗಾನೂ ಕೂತುಕೊಳ್ಳಲಿ, ಗರುಡಾನೂ ಕೂತುಕೊಳ್ಳಲಿ...."

ಇಷ್ಟು ಹೇಳಿ ಹೊರಡಲು ಎದ್ದ ಮುದುಕನಿಗೆ ಹೆಡ್ಮಾಸ್ತರು ಹೇಳಿದ, "ಏನೂ ತಿಳ್ಕೋಬೇಡಿ. ಈ ಸ್ಕೂಲ್ ಕಾಂಪೌಂಡನ್ನ ಓಣೀ ಮಾಡೋಕಾಗಲ್ಲ. ಅದು ನಮ್ಮ ರೂಲ್ಸ್‌ಗೆ ವಿರುದ್ಧವಾದದ್ದು. ನಮ್ಮ ಕಾಂಪೌಂಡಿನ ಪಕ್ಕದಲ್ಲೇ ನೀವು ಇನ್ನೊಂದು ದಾರಿ ಮಾಡ್ಕೊಳ್ಳೋದು ಒಳ್ಳೇದು. ನಿಮಗೆ ಸಹಾಯಕ್ಕೆ ಬೇಕಾದ್ರೆ ನಮ್ಮ ಹುಡುಗರನ್ನೂ ಕಳಿಸ್ತೀನಿ, ಸತ್ತು ಹೋಗಿರೋ ಹಿರೀಕರು ಒಂಚೂರು ಬಳಸು ದಾರೀಲಿ ಹೋದ್ರೆ ತೀರಾ ದೂರ ಏನಾಗಲ್ಲ...."

"ಇನ್ನೇನೂ ಹೆಚ್ಚಿಗೆ ಹೇಳಲ್ಲಪ್ಪ ನಾನು" ಹೊರಟು ಹೊರಗಡೆ ಅಡಿಯಿಟ್ಟಿದ್ದ ಮುದುಕ ಹೇಳುತ್ತಾ ಮೆಟ್ಟಿಲಿಳಿದು ಹೋಗಿ ಬಿಟ್ಟ.

ಇದಾದ ಎರಡು ದಿನದ ನಂತರ ಹಳ್ಳಿಯ ಇಬ್ಬರು ಎಳೆಯ ಪ್ರಾಯದ ಬಾಣಂತಿಯರು ಇದ್ದಕ್ಕಿದ್ದಂತೆ ತೀರಿಕೊಂಡರು. ಊರ ಜನ ಶಾಸ್ತ್ರ ಕೇಳಿಸಿದರೆ, ಶಾಸ್ತ್ರ ಹೇಳುವ ಅಜ್ಜ ಕಾಲುಹಾದಿಗೆ ಹಾಕಿದ ಬೇಲಿಯಿಂದಾಗಿ ಅವಮಾನಗೊಂಡ ಸತ್ತ ಹಿರೀಕರನ್ನು ಶಾಂತಗೊಳಿಸಲು ದುಬಾರಿಯಾದ ಬಲಿಗಳನ್ನು ಸೂಚಿಸಿದ.

ಮಾರನೆಯ ಬೆಳಿಗ್ಗೆ ಓಬಿ ಎದ್ದು ಹೊರಬಂದಾಗ ತನ್ನ ಹಲವು ದಿನಗಳ ಶ್ರಮವೆಲ್ಲ ಮಣ್ಣುಪಾಲಾಗಿರುವುದನ್ನು ಕಂಡ. ಬರೇ ಕಾಲುಹಾದಿಗೆ ಅಡ್ಡವಾಗಿದ್ದ ಬೇಲಿ ಮಾತ್ರವಲ್ಲ, ಇಡೀ ಸ್ಕೂಲಿನ ಸುತ್ತ ಇದ್ದ ಸುಂದರವಾದ ಗಿಡಗಳೂ, ಬೇಲಿಗಳೂ ಎಲ್ಲ ನೆಲ ಕಚ್ಚಿದ್ದವು. ಹರಿದ ಹೂ ಪಕಳೆಗಳು, ಎಲೆಗಳು ನೆಲದ ತುಂಬಾ ಚೆಲ್ಲಿದ್ದವು. ಸ್ಕೂಲಿನ ಕಟ್ಟಡದ ಒಂದು ಭಾಗ ಉರುಳಿ ಬಿದ್ದಿತ್ತು. ಅಂದು ಮಧ್ಯಾಹ್ನ ಸ್ಕೂಲಿನ ತಪಾಸಣೆಗೆಂದು ಬಂದ ಬ್ರಿಟಿಷ್ ಸೂಪರ್‌ವೈಸರ್ ಸ್ಕೂಲ್ ಕಾಂಪೌಂಡಿನ ದುಃಸ್ಥಿತಿಯ ಬಗೆಗೆ ಕಟುವಾದ ರಿಪೋರ್ಟನ್ನು ಬರೆದು ಹೋದ. ಆ ರಿಪೋರ್ಟನಲ್ಲಿ ಅದಕ್ಕಿಂತ ಗಂಭೀರವಾದ ಆಪಾದನೆಯೊಂದಿತ್ತು : ಅದು, ಹೊಸ ಹೆಡ್‌ಮಾಸ್ತರನ ಹಾದಿತಪ್ಪಿದ ಉತ್ಸಾಹದ ಫಲವಾಗಿ ಹಳ್ಳಿ ಮತ್ತು ಸ್ಕೂಲಿನ ನಡುವೆ ಹುಟ್ಟಿದ್ದ ಗಂಭೀರ ಸ್ವರೂಪದ ಜಗಳದ ಕುರಿತದ್ದಾಗಿತ್ತು.

# ಸುಮತಿಯ ಬಾಲ್ಯ

ಮಲೆಯಾಳಂ ಮೂಲ : ಶೋಭಾ ವಾರಿಯರ್
ಕನ್ನಡಕ್ಕೆ : ಶರ್ವಾಣಿ

ಸುಮತಿಗೆ ತೊಟ್ಟುಕೊಳ್ಳಲು ಇದ್ದುದು ಎರಡೇ ಎರಡು ಫ್ರಾಕುಗಳು. ಒಂದು ಹಸಿರು ಬಣ್ಣದ್ದು, ಮತ್ತೊಂದು ಗೋಧಿ ಬಣ್ಣದ್ದು.... ಮೊಣಕಾಲಿನವರೆಗೂ ಇಳಿ ಬಿದ್ದ ಆ ದೊಗಳೆ ಉಡುಪನ್ನು ನೋಡಿದರೇನೇ ತಿಳಿಯುತ್ತಿತ್ತು–ಅದು ಅವಳಿಗಾಗಿ ಹೊಲಿಸಿದ್ದಲ್ಲವೆಂದು. ಆದರೂ ಅದು ಅವಳ ಸ್ವಂತದ್ದೇ ಆಗಿತ್ತು. ಅಯ್ಯಾರಮ್ಮ ಅದನ್ನು ಅವಳಿಗಾಗಿಯೇ ಕೊಂಡು ತಂದಿದ್ದಳು. ಸ್ವಲ್ಪ ಸಡಿಲವಾಗಿ, ಒಂದಿಷ್ಟು ಉದ್ದ ಹೆಚ್ಚಾಗಿದ್ದರೆ ಹೆಚ್ಚು ದಿನ ಬಳಸಿಕೊಳ್ಳಬಹುದೆಂಬುದೇ ಆಕೆಯ ಅಭಿಪ್ರಾಯ. ಸುಮತಿ ಆಕೆಯನ್ನು 'ಅಯ್ಯಾರಮ್ಮಾ' ಎಂದೇ ಕರೆಯುತ್ತಿದ್ದಳು. ತನ್ನ ತಾಯಿಯನ್ನು 'ಅಕ್ಕಾ' ಎನ್ನುತ್ತಿದ್ದಳು.

ಭುಜದವರೆಗೂ ಮಾತ್ರವೇ ಬರುತ್ತಿದ್ದ ತನ್ನ ಎರಡು ಪುಟ್ಟ ಜಡೆಗಳನ್ನು ಕುಣಿಸುತ್ತಾ ಮನೆ ತುಂಬಾ ಓಡಾಡುತ್ತಿದ್ದಳು ಸುಮತಿ. ಅವಳಲ್ಲಿ ಜೀವನೋತ್ಸಾಹ ತುಂಬಿ ತುಳುಕುತ್ತಿತ್ತು. ಇಲ್ಲಿಂದಲ್ಲಿಗೆ ಅವಳ ಓಡಾಟವೇ ಓಡಾಟ. ಯಾವುದನ್ನು ನೋಡಿದರೂ ಅವಳಿಗೆ ಆನಂದವೇ ಆನಂದ. ಎಲ್ಲರನ್ನೂ ನಗುನಗುತ್ತಾ ಮಾತನಾಡಿಸುತ್ತಿದ್ದಳು.

ಆದರೆ ಅವಳ ತಾಯಿಯ ಮುಖದ ಮೇಲೆ ಮಾತ್ರ ಎಂದೂ ನಗು ಕಾಣುತ್ತಲೇ ಇರಲಿಲ್ಲ. ದೋಸೆಹಿಟ್ಟು ರುಬ್ಬುವಾಗ, ದೋಸೆ ಹಾಕುವಾಗ, ತರಕಾರಿ ಹೆಚ್ಚುವಾಗ, ನೀರು ಸೇದುವಾಗ–ಸದಾ ಅವಳದ್ದು ಭಾವರಹಿತ ಮುಖಮುದ್ರೆ.

ಸುಮತಿ ಸ್ಕೂಲಿಗೆ ಹೋಗುತ್ತಿದ್ದುದು ಮಧ್ಯಾಹ್ನ ಮಾತ್ರ. ಬೆಳಗಿನ ಸಮಯವೆಲ್ಲಾ ಅವಳಿಗೆ ಅಯ್ಯಾರಮ್ಮ ಹೇಳುವ ಸಣ್ಣಪುಟ್ಟ ಕೆಲಸಗಳನ್ನು ಮಾಡುವುದರಲ್ಲಿಯೇ ಕಳೆದು ಹೋಗುತ್ತಿತ್ತು. ಅಂಗಡಿಗೆ ಹೋಗಿ ಅದುತಾ, ಇದುತಾ ಎಂದು ಯಾವುದಾದರೊಂದು ಚಿಲ್ಲರೆ ಕೆಲಸ ಹೇಳುತ್ತಲೇ ಇದ್ದಳಾಕೆ. ಸುಮತಿಯ ತಾಯಿ ಈ ವಿಷಯದಲ್ಲಿ ಮಾತ್ರ ಬಾಯಿಮುಚ್ಚಿ ಕೂರುತ್ತಿರಲಿಲ್ಲ. ಅಯ್ಯಾರಮ್ಮನೊಂದಿಗೆ ಜಗಳವಾದರೂ

ಸರಿ ಎಂಬಂತೆ ತನ್ನ ಅಸಹನೆಯನ್ನು ಹೊರಹಾಕುತ್ತಿದ್ದಳು. 'ಪರೀಕ್ಷೆ ದಿನಗಳಲ್ಲಿ ಸಹ ಈ ರೀತಿ ಅಂಗಡಿ ಪಂಗಡಿ ಅಂತ ಓಡಿಸ್ತಾ ಇದ್ದರೆ ಇನ್ನು ಅವಳು ಓದಿಕೊಳ್ಳೋದು ಯಾವಾಗ?' ಅಂತ ಮೆಲ್ಲಮೆಲ್ಲನೆ ಗೊಣಗುತ್ತಿದ್ದಳು. ಅದು ಅಯ್ಯಾರಮ್ಮನಿಗೆ ಕೇಳಿಸುತ್ತಿತ್ತು ಸಹ. ಕೂಡಲೇ ಆಕೆ ಕೂಗಾಟ ಪ್ರಾರಂಭಿಸುತ್ತಿದ್ದಳು.

"ಇಷ್ಟೊಂದು ದುಡ್ಡು ಸುರಿದು ನಿಮ್ಮಿಬ್ಬರನ್ನ ಪೋಷಿಸ್ತಾ ಇಲ್ಲವೇನು? ಅವಳನ್ನ ಸ್ಕೂಲಿಗೆ ಕಳಿಸೋಕೆ ಎಷ್ಟು ದುಡ್ಡು ಖರ್ಚಾಗ್ತಾ ಇದೆ ಅಂತ ಗೊತ್ತೇನು ನಿನಗೆ?"

"ಬೆಳಗಿನಿಂದ ರಾತ್ರಿವರೆಗೂ ಮೈಮುರಿಯ ದುಡೀತಿಲ್ಲವೇನು? ನೀನೇನು ಬಿಟ್ಟಿ ಕೂಳು ಹಾಕ್ತಾ ಇಲ್ಲ ನಮಗೆ" ಸುಮತಿಯ ತಾಯಿ ಜೋರಾಗಿಯೇ ಉತ್ತರಿಸುತ್ತಿದ್ದಳು.

ಸುಮತಿಯ ತಾಯಿ ಗಟ್ಟಿಯಾಗಿ ಮಾತನಾಡುವುದೇ ಅಪರೂಪ. ಹಾಗೆ ಮಾತನಾಡುವುದೆಂದರೆ ಅದು ಅಯ್ಯಾರಮ್ಮನೊಂದಿಗೆ ಜಗಳವಾದಾಗ ಮಾತ್ರವೇ.... ಆಗ ಸುಮತಿಗೆ ಎಲ್ಲಿಲ್ಲದ ಹೆದರಿಕೆಯಾಗುತ್ತಿತ್ತು. ಅಂತಹ ಸಂದರ್ಭ ಬಂದಾಗ ಎರಡೂ ಕಿವಿಗಳನ್ನು ಮುಚ್ಚಿಕೊಂಡು ಅಲ್ಲಿಂದ ಓಡಿಹೋಗುತ್ತಿದ್ದಳು. ಹಾಗೆ ಓಡಿ ಹೋಗಿ ಕಾಫಿ ಗಿಡಗಳ ಕೊಂಬೆಗಳ ಮೇಲೆ ಕುಳಿತು ಮೆಲ್ಲನೆ ತೂಗಿಕೊಳ್ಳುತ್ತಿದ್ದಳು.

ಆಗಾಗ ಹಾಗೆ ಕುಳಿತು ರೈಲಿನಲ್ಲಿ ಬಹಳ ದೂರ ಪ್ರಯಾಣ ಮಾಡಿದಂತೆ ಹಗಲು ಕನಸು ಕಾಣುತ್ತಿದ್ದಳು. ಆದರೆ ಅವಳೆಂದೂ ರೈಲನ್ನು ನೋಡಿಯೂ ಇರಲಿಲ್ಲ. ಅಷ್ಟೇ ಅಲ್ಲ, ರೈಲನ್ನು ಹತ್ತಿ ಎಲ್ಲಿಗೆ ಹೋಗಬೇಕೆಂಬುದೂ ಸಹ ಆ ಹುಡುಗಿಗೆ ಗೊತ್ತಿರಲಿಲ್ಲ. ಆದರೆ ಅವಳಿಗೆ ಬೇಕಾಗಿದ್ದುದೆಂದರೆ, ಆ ರೈಲಿನಲ್ಲಿ ತಾನು ತುಂಬಾ ದೂರ ದೂರ ಹೋಗಬೇಕು. ತನ್ನನ್ನು ಯಾರೂ ಏನೂ ಅನ್ನದಿದ್ದರೆ ಸಾಕು, ಬಯ್ಯದಿದ್ದರೆ ಸಾಕು, ಅಂತಹ ಪ್ರದೇಶಕ್ಕೆ ಹೋಗಬೇಕು ತಾನು. ಆ ದೂರ ಪ್ರದೇಶ ದಲ್ಲಿ ಗಿಡಮರಗಳೂ, ಹೂವು ಹಣ್ಣುಗಳೂ ತುಂಬಿದ್ದಂತೆ ಕನಸು ಕಾಣುತ್ತಿದ್ದಳು. ಮರುಕ್ಷಣದಲ್ಲಿ... ಅಯ್ಯೋ.... ಹಾಗೆ ಹೊರಟು ಹೋಗುವುದು ಬೇಡ.... ತಾನು ಹೊರಟು ಹೋದರೆ ಅಮ್ಮನಿಗೆ ಯಾರು ಜತೆ? ಆಕೆ ಒಂಟಿಯಾಗಿಬಿಡುತ್ತಾಳಲ್ಲಾ.... ಹಾಂ.... ಅದೇ ಸರಿ, ತಾನು ಎಲ್ಲಿಗೆ ಹೋದರೂ ಅಮ್ಮನ ಜತೆಯಲ್ಲಿಯೇ ಹೋಗ ಬೇಕು.... ಏನಾದರೂ ಸರಿ, ಕಷ್ಟ-ಸುಖ ಎಲ್ಲದರಲ್ಲಿಯೂ ಅಮ್ಮ ತಾನು ಒಬ್ಬರಿ ಗೊಬ್ಬರು ಜತೆ.... ಆಸರೆ.... ಎಲ್ಲಾನೂ ಎಂದು ನಿಶ್ಚಯಿಸಿಕೊಳ್ಳುತ್ತಿದ್ದಳು.

ಸುಮತಿಗೂ ಅವರಮ್ಮನಿಗೂ ಅಡಿಗೆ ಮನೆಯ ಪಕ್ಕದಲ್ಲಿಯೇ ಸಣ್ಣ ಕೋಣೆ ಯೊಂದನ್ನು ಕೊಟ್ಟಿದ್ದರು. ಅದರಲ್ಲಿ ಅವರ ಸ್ವಂತದ್ದೆಂದು ಇದ್ದುದು ಎರಡು ಪುಟ್ಟ ಟ್ರಂಕುಪೆಟ್ಟಿಗೆಗಳು ಮಾತ್ರ. ಅವರು ಮಲಗಲು ಬಳಸುತ್ತಿದ್ದ ಚಾಪೆ ದಿಂಬೂ ಸಹ ಅಯ್ಯಾರಮ್ಮ ಕೊಟ್ಟಿದ್ದೇ.

ಸುಮತಿ ಮತ್ತು ಅವರ ತಾಯಿ ಒಬ್ಬರೊಡನೊಬ್ಬರು ಮಾತನಾಡಿಕೊಳ್ಳು ತ್ತಿದ್ದುದೂ ಸಹ ಮಲಗುವ ಸಮಯದಲ್ಲಿಯೇ.... ತಾಯಿ ಕೆಲಸ ಮುಗಿಸಿ ಬರುವ

ವರೆಗೂ, ನಿದ್ದೆಯನ್ನು ತಡೆಹಿಡಿದು, ತೂಕಡಿಸುತ್ತಾ ತಾಯಿಗಾಗಿ ಕಾಯುತ್ತಿದ್ದಳು, ಸುಮತಿ. ದಿನದಲ್ಲಿ ತಾವಿಬ್ಬರೂ ಕೂಡಿ ಕಳೆಯುವ ಆ ಅಲ್ಪ ಸಮಯಕ್ಕಾಗಿ ಅವಳ ಮನ ಹಾತೊರೆಯುತ್ತಿತ್ತು.

ಲಕ್ಷ್ಮಿಅಕ್ಕ ಆಗಾಗ ಸುಮತಿಗೆ ತಮಿಳು ಪುಸ್ತಕಗಳನ್ನು ಕೊಡುತ್ತಿದ್ದಳು. ತಾಯಿಗಾಗಿ ಕಾದು ಕುಳಿತಿರಬೇಕಾದಾಗ ಸುಮತಿ ಆ ಪುಸ್ತಕಗಳನ್ನು ಮತ್ತೆ ಮತ್ತೆ ಓದುತ್ತಿದ್ದಳು. ವಾರಕ್ಕೊಮ್ಮೆ ಮಾತ್ರ ಅವಳಿಗೆ ಹೊಸ ತಮಿಳು ಪುಸ್ತಕ ಸಿಗುತ್ತಿದ್ದುದು. ಕೈಯಲ್ಲಿ ಪುಸ್ತಕ ಹಿಡಿದು ಕುಳಿತರೂ ಹುಡುಗಿಯ ಮನಸ್ಸೆಲ್ಲಾ ಅಡಿಗೆ ಮನೆಯಿಂದ ಕೇಳಿ ಬರುತ್ತಿದ್ದ ಶಬ್ದಗಳ ಮೇಲೆಯೇ ಕೇಂದ್ರೀಕೃತವಾಗಿರುತ್ತಿತ್ತು. ಪಾತ್ರೆಗಳನ್ನು ತೊಳೆಯುವ ಶಬ್ದವನ್ನು ಕೇಳುತ್ತಾ ಅದು ಯಾವಾಗ ನಿಂತು ಹೋಗುತ್ತದೆಯೋ ಎಂದು ಎದುರು ನೋಡುವಳು. ಮನೆಯಲ್ಲಿ ಎಲ್ಲರದೂ ಊಟ ಮುಗಿದ ನಂತರ, ಅಡಿಗೆ ಮನೆಯನ್ನು ಚೊಕ್ಕಟವಾಗಿ ತೊಳೆದು, ಒರೆಸಿದ ಹೊರತು ಹೊರಗೆ ಬರುತ್ತಿರಲಿಲ್ಲ ಅವಳ ತಾಯಿ. ಅಯ್ಯಾರಮ್ಮ ಹಾಯಾಗಿ ಕಾಲು ಚಾಚಿ ಕುಳಿತಿರುತ್ತಿದ್ದಳು. ಆಕೆಗೆಂದೂ ಅಡಿಗೆ ಮನೆಯ ಕೆಲಸಕಾರ್ಯ ಮಾಡಬೇಕಾದ ಆವಶ್ಯಕತೆಯೇ ಇರುತ್ತಿರಲಿಲ್ಲ.

ಪ್ರತಿದಿನವೂ ತಾಯಿಗಾಗಿ ಎದುರು ನೋಡುತ್ತಾ ನಿದ್ದೆ ಮಾಡದೆ ಕುಳಿತಿರಲು ಸುಮತಿಗೆ ಸಾಧ್ಯವಾಗುತ್ತಿರಲಿಲ್ಲ. ಒಂದೊಂದು ದಿನ ಕಣ್ಣು ಎಳೆದುಕೊಂಡು ಹೋಗಿ ಕಣ್ರೆಪ್ಪೆ ಭಾರವಾಗಿ ಕಣ್ಣು ಮುಚ್ಚಿಕೊಳ್ಳುವಂತಾಗುತ್ತಿತ್ತು. ಮನಸ್ಸು ವಿಚಿತ್ರವಾದ ಕನಸಿನ ಲೋಕವನ್ನು ಹುಡುಕಿಕೊಂಡು ಹೋಗಿ ನಿದ್ದೆಯೊಳಕ್ಕೆ ಜಾರಿಕೊಳ್ಳುತ್ತಿದ್ದಳು. ತಾಯಿ ಬರುವ ವೇಳೆಗೆ ಅವಳು ನಿದ್ದೆಮಾಡಿಬಿಟ್ಟಿದ್ದರೆ ಆಕೆ ಮಗಳಿಗೊಂದು ಸಿಹಿ ಮುತ್ತನ್ನು ಕೊಟ್ಟು ತಾನೂ ಮಲಗುತ್ತಿದ್ದಳು. ಒಂದೊಂದು ಸಲ ಆ ಸಿಹಿ ಮುತ್ತಿಗಾಗಿ ಸುಮತಿ ನಿದ್ದೆ ಬಾರದಿದ್ದರೂ ಬಂದಂತೆ ಕಣ್ಣುಮುಚ್ಚಿ ಮಲಗುತ್ತಿದ್ದಳು. ಏಕೆಂದರೆ ಎಚ್ಚರವಾಗಿದ್ದರೆ ಆ ಮುತ್ತು ಅವಳಿಗೆ ಸಿಗುತ್ತಿರಲಿಲ್ಲ.

ಶನಿವಾರದ ದಿನ ಮಾತ್ರ ಅವರ ತಾಯಿಗೆ ಅಡಿಗೆ ಮನೆಯ ಕೆಲಸದಿಂದ ಸ್ವಲ್ಪ ಬೇಗ ಬಿಡುಗಡೆಯಾಗುತ್ತಿತ್ತು. ಆಗ ಸ್ನಾನಮಾಡಿ, ಹಣೆಗೆ ವಿಭೂತಿ ಹಚ್ಚಿಕೊಂಡು, ತಲೆಯಲ್ಲಿ ಒಂದೋ ಎರಡೋ ಮಲ್ಲಿಗೆಯ ಬಿಡಿಹೂಗಳನ್ನಿರಿಸಿಕೊಳ್ಳುತ್ತಿದ್ದಳು. ಬಣ್ಣ ಹೋದರೂ ಒಗೆದು ಗಂಜಿ ಹಾಕಿ, ಮಡಿಚಿಟ್ಟ ಕೆಂಪುಬಣ್ಣದ ಸೀರೆಯನ್ನು ಉಟ್ಟುಕೊಳ್ಳುತ್ತಿದ್ದಳು. ಸುಮತಿಗೆ ಈ ಶನಿವಾರಗಳ ಪ್ರತ್ಯೇಕತೆ ಏನೆಂಬುದು ತಿಳಿಯದು. ಆದರೆ ಆ ದಿನ ರಾತ್ರಿಯ ವೇಳೆ ಅವರ ತಾಯಿ ಸುಪ್ರಭಾತವನ್ನು ಇನಿದನಿಯಲ್ಲಿ ಹಾಡುತ್ತಿದ್ದರೆ ಕೇಳಲು ತುಂಬಾ ಇಷ್ಟ ಅವಳಿಗೆ. ಆಗ ತಾಯಿಯ ತಲೆಯಿಂದ ಒಂದೊಂದೇ ಬಿಳಿಯ ಕೂದಲುಗಳನ್ನು ಕಿತ್ತುಹಾಕುವುದೆಂದರೆ ಇನ್ನೂ ಇಷ್ಟ. ಈ ಅಭ್ಯಾಸ ಎಂದು ಮೊದಲಾಯಿತೆಂಬುದು ಅವಳಿಗೆ ನೆನಪಿಲ್ಲ. ಆದರೆ ಬರಬರುತ್ತಾ ಶನಿವಾರಗಳಂದು ಅವಳು ಕೀಳಬೇಕಾದ ಬಿಳಿಕೂದಲುಗಳ ಸಂಖ್ಯೆ ಹೆಚ್ಚಾಗುತ್ತಾ

ಬರುತ್ತಿದೆಯೆಂಬುದರ ಅರಿವುಮಟ್ಟಿಗೆ ಅವಳಿಗಾಗಿತ್ತು. ಸುಪ್ರಭಾತ ಹಾಡಿದ ನಂತರ ಅವರ ತಾಯಿ ಕಣ್ಣು ತೆರೆದು ಕಿರುನಗೆ ಬೀರುತ್ತಿದ್ದಳು. ಆ ನಗೆಯೆಂದರೆ ಪ್ರಾಣ ಸುಮತಿಗೆ. "ನಾನು ರಾತ್ರಿಯ ವೇಳೆ ಸುಪ್ರಭಾತ ಏಕೆ ಹಾಡುತ್ತೇನೆ ಗೊತ್ತೇನು ? ಈ ರಾತ್ರಿಯ ವೇಳೆಯಲ್ಲಾದರೂ ಬೆಳಗಿನ ಸೌಂದರ್ಯ ಮತ್ತು ಪ್ರಶಾಂತ ವಾತಾವರಣದ ಅನುಭವ ನಮ್ಮನ್ನು ಆವರಿಸುತ್ತದೆಯೇನೋ ಅಂತ" ಎನ್ನುತ್ತಿದ್ದರಾಕೆ.

ಆಗಾಗ ಸುಮತಿ ತಾಯಿಯ ಅಂಗೈಗಳನ್ನು ಹಿಡಿದು ತದೇಕವಾಗಿ ನೋಡುತ್ತಿದ್ದಳು. ಅವು ತುಂಬಾ ಸುಂದರವಾಗಿದ್ದುವು. ಇಷ್ಟು ದುಡಿದರೂ ಸಹ ಆ ಕೈಗಳು ತಮ್ಮ ಮೃದುತ್ವವನ್ನು ಕಳೆದುಕೊಳ್ಳದೆ ಗುಲಾಬಿ ಬಣ್ಣದಿಂದ ಸುಂದರವಾಗಿ ಕಾಣುತ್ತಿದ್ದುವು. ಆದರೆ ಆಕೆಯ ಪಾದಗಳು ಮಾತ್ರ ಒಡೆದು ರಕ್ತ ಸೋರುವಂತಿದ್ದುವು. ಪಾದಗಳನ್ನು ಶುಚಿಯಾಗಿರಿಸಿಕೊಳ್ಳೆಂದು ತಾಯಿಗೆ ಹೇಳಬೇಕೆನಿಸುತ್ತಿತ್ತು, ಸುಮತಿಗೆ. ಆದರೆ ಆ ಮಾತು ಹೇಳಬೇಕೆಂದರೆ ಹೆದರಿಕೆಯೂ ಆಗುತ್ತಿತ್ತು.

ಮೈಬಣ್ಣ ಬಿಳುಪಾಗಿದ್ದರೆ ಇಷ್ಟ ಸುಮತಿಗೆ. ಅಯ್ಯಾರಮ್ಮ, ಲಕ್ಷ್ಮಿ ಅಕ್ಕ, ಪಾರ್ವತಕ್ಕ, ತನ್ನ ತಾಯಿ, ಆ ಮನೆಯಲ್ಲಿನ ಇತರ ಮಕ್ಕಳು, ಎಲ್ಲರ ಬಣ್ಣ ಬಿಳುಪೇ ಆಗಿತ್ತು. ಸುಮತಿ, ಅಯ್ಯಾರಮ್ಮನ ಗಂಡ ಇಬ್ಬರ ಬಣ್ಣ ಮಾತ್ರವೇ ಕಪ್ಪು.

ಆ ಹುಡುಗಿಗೆ ಇಷ್ಟವಾದ ಹವ್ಯಾಸಗಳಲ್ಲಿ ಲಕ್ಷ್ಮಿಅಕ್ಕನ ಪಾದಗಳನ್ನು ನೋಡುತ್ತಾ ಕೂರುವುದೂ ಒಂದು. ಗುಲಾಬಿ ಬಣ್ಣದ ಮೃದುವಾದ ಸುಂದರ ಸುಕೋಮಲ ಪಾದಗಳು—ಲಕ್ಷ್ಮಿಯವು. ಸುಮತಿ ಆ ಪಾದಗಳನ್ನು ನೋಡುತ್ತಾ ಮೈಮರೆತು "ಅಕ್ಕಾ ನಿನ್ನ ಪಾದಗಳು ಎಷ್ಟು ಚಂದ....! ದೇವರ ಪಾದಗಳಂತೆ ಎಷ್ಟು ಅಂದ...." ಎನ್ನುತ್ತಿದ್ದಳು. ಲಕ್ಷ್ಮಿ ನಕ್ಕುಬಿಡುತ್ತಿದ್ದಳು. "ನಿನಗೇನು ಹುಚ್ಚೇ ಸುಮತಿ ?" ಎಂದೆಂದು ಅವಳನ್ನು ಪಕ್ಕಕ್ಕೆ ಸರಿಸುತ್ತಿದ್ದಳು.

ಸುಮತಿ ಅವಳ ಬಳಿ ಹೋಗಿ ಆ ಪಾದಗಳನ್ನು ಸೋಕಿದರಾದರೂ ತನ್ನ ಮೈಗೆ ಸ್ವಲ್ಪ ಬಣ್ಣ ಅಂಟಿಕೊಳ್ಳುವುದೇನೋ ಎಂದು ಪ್ರಯತ್ನಿಸುತ್ತಿದ್ದಳು. "ಅಕ್ಕಾ. ನಾನೇಕೆ ಇಷ್ಟು ಕಪ್ಪಗಿದೇನೆ ?" ಎಂದು ನೊಂದ ದನಿಯಲ್ಲಿ ಪ್ರಶ್ನಿಸುತ್ತಿದ್ದಳು. ಲಕ್ಷ್ಮಿ ಅವಳನ್ನು ಸಂತೈಸುವಂತೆ "ನೀನೇನೂ ಅಷ್ಟು ಕಪ್ಪಾಗಿಲ್ಲ ಬಿಡು" ಎನ್ನುತ್ತಿದ್ದಳು. ಆ ಹುಡುಗಿಗೆ ಗೊತ್ತು, ಲಕ್ಷ್ಮಿ ಅಕ್ಕ ಸುಳ್ಳು ಹೇಳುತ್ತಿದ್ದಾಳೆಂದು....

ಲಕ್ಷ್ಮಿ ಅಕ್ಕನ ಬಳಿ ರಾಶಿ ರಾಶಿ ಬಟ್ಟೆಗಳಿದ್ದುವು. ಬೆಲೆಬಾಳುವ ಚುಡಿದಾರ್ ಡ್ರೆಸ್ಸುಗಳೂ ಬೇಕಾದಷ್ಟಿದ್ದುವು. ಅವಳಿಗೆ ಒತ್ತಾದ ಉದ್ದನೆಯ ಕೂದಲಿತ್ತು. ಅವಳ ಸುಂದರವಾದ ಗುಲಾಬಿ ಬಣ್ಣದ ಪಾದಗಳನ್ನು ಅಲಂಕರಿಸಲು ಬೆಳ್ಳಿಯ ಕಾಲಚೈನುಗಳಿದ್ದುವು. ಇವುಗಳನ್ನು ಕೊಂಡುಕೊಡಲು ಅವಳಿಗೆ ಒಬ್ಬ ಅಪ್ಪನೂ ಇದ್ದ. ಸುಮತಿಗೆ ಇದ್ದುದು ಆ ಎರಡು ಫ್ರಾಕುಗಳು ಮಾತ್ರ. ಕೂದಲು ಭುಜದ ಬಳಿಗೆ ಮಾತ್ರವೇ ಬರುತ್ತಿತ್ತು. ತಂದೆ ಇರಲಿಲ್ಲ. ಕನಿಷ್ಠಪಕ್ಷ ತಂದೆಯ ಫೋಟೋ

ಸಹ ಇರಲಿಲ್ಲ. ಫೋಟೋವನ್ನಾದರೂ ನೋಡಬೇಕೆಂದು ತೀವ್ರವಾಗಿ ಅನಿಸುತ್ತಿತ್ತು ವಳಿಗೆ, ಆದರೆ ಯಾರನ್ನು ಕೇಳುವುದು ?....

ಸುಮತಿಗೆ ಇಂಗ್ಲಿಷ್ ಓದಲು ಬಾರದು. ಲಕ್ಷ್ಮಿ ಅಕ್ಕ ಓದುತ್ತಿದ್ದುದು ಬರೀ ಇಂಗ್ಲಿಷ್ ಪುಸ್ತಕಗಳನ್ನೇ. ಇಂಗ್ಲಿಷ್ ಪುಸ್ತಕಗಳನ್ನು ಓದಬೇಕೆಂದು ಆಸೆಯಾಗು ತ್ತಿತ್ತು. ಆದರೆ ಅವಳು ಓದುತ್ತಿದ್ದುದು ತಮಿಳು ಮೀಡಿಯಂ ಮುನಿಸಿಪಲ್ ಸ್ಕೂಲಿ ನಲ್ಲಿ. ಲಕ್ಷ್ಮಿ ಅಕ್ಕ ಮಿಕ್ಕ ಮಕ್ಕಳೂ ಇಂಗ್ಲಿಷ್ ಮೀಡಿಯಂನ ಕಾನ್ವೆಂಟ್ ಸ್ಕೂಲಿಗೆ ಹೋಗುತ್ತಿದ್ದರು. ತಾನು ಮಾತ್ರ ಮುನಿಸಿಪಲ್ ಸ್ಕೂಲಿಗೆ ಏಕೆ ಹೋಗಬೇಕು ಎಂಬ ಪ್ರಶ್ನೆಗೆ, ತಲೆಚಚ್ಚಿಕೊಂಡರೂ ಉತ್ತರ ಸಿಗುತ್ತಿರಲಿಲ್ಲ, ಅವಳಿಗೆ.

ಲಕ್ಷ್ಮಿ ಅಕ್ಕ ಮಂಚದ ಮೇಲೆ ಬೋರಲು ಮಲಗಿ, ಕೈಯಲ್ಲಿ ಪುಸ್ತಕ ಹಿಡಿದು, ಕಾಲುಗಳನ್ನೆತ್ತಿ ಅಲ್ಲಾಡಿಸುತ್ತಾ ಓದುವುದರಲ್ಲಿ ಮಗ್ನಳಾಗಿರುತ್ತಿದ್ದಳು. ಸುಮತಿ ಆ ಕಾಲುಗಳನ್ನೇ ಗಮನಿಸುತ್ತಾ ಕೂರುತ್ತಿದ್ದಳು. ಈ ನಡುವೆ ಆ ಕಾಲುಗಳ ಬಣ್ಣ ಸ್ವಲ್ಪ ಬಿಳಿಚಿಕೊಂಡಂತೆನಿಸಿತ್ತು ಅವಳಿಗೆ. ಅಷ್ಟೇ ಅಲ್ಲದೆ ಆ ಹುಡುಗಿಗಿದ್ದ ಅನೇಕ ಸಮಸ್ಯೆಗಳಲ್ಲಿ ಒಂದಕ್ಕೆ ಉತ್ತರ ಸಹ ಸಿಕ್ಕಿತ್ತು.... ಯಾರೂ ಇಲ್ಲದಾಗ ಅಂಗತ್ತಾಗಿ ಮಲಗಿ, ತನ್ನ ಕಾಲುಗಳನ್ನು ಗೋಡೆಗಾನಿಸಿ ಒತ್ತಿಹಿಡಿದು ಬಹಳ ಹೊತ್ತು ಗಮನಿ ಸಿದ್ದಳು. ಎಷ್ಟು ಹೊತ್ತು ನೋಡಿದರೂ ಅವುಗಳ ಬಣ್ಣ ಕಪ್ಪೇ ಆಗಿರುತ್ತಿತ್ತು.

ಅಂತಹ ದಿನಗಳಲ್ಲಿಯೇ ಒಂದು ದಿನ ಲಕ್ಷ್ಮಿ ಅಕ್ಕ ಮಂಚದ ಮೇಲೆ ಒರಗಿದ್ದಾಗ ತನ್ನ ಎಂದಿನ ಅಭ್ಯಾಸದಂತೆ ಸುಮತಿ ಅಲ್ಲಿಯೇ ನೆಲದ ಮೇಲೆ ಕುಳಿತು ಅವಳ ಪಾದ ಗಳನ್ನು ಗಮನಿಸಿದಾಗ ಆಕೆಯ ಎಡಪಾದಕ್ಕೆ ಆರು ಬೆರಳುಗಳಿದ್ದುದು ಕಾಣಿಸಿತು. ಏನನ್ನೋ ನೆನಪಿಸಿಕೊಂಡವಳಂತೆ,

"ಅಕ್ಕಾ, ನಿನಗೂ, ನನಗೂ ನಿಮ್ಮ ತಂದೆಯವರಿಗೂ ಎಡಗಾಲಿಗೆ ಆರು ಬೆರಳು ಗಳಿವೆಯಲ್ಲವೇ ? ಅದೇಕೆ ?" ಎಂದು ಆಶ್ಚರ್ಯದಿಂದ ಕೂಗಿ ಹೇಳಿದಳು.

"ಥತ್ ಹೋಗಾಚೆ...." ಎಂದು ಸಿಟ್ಟಿನಿಂದ ಗದರಿಸಿದ್ದಳು ಲಕ್ಷ್ಮಿ ಅಕ್ಕ. ಲಕ್ಷ್ಮಿ ಅಕ್ಕ ಸಿಟ್ಟುಮಾಡಿಕೊಂಡದ್ದನ್ನು ನೋಡಿ ಸುಮತಿಗೆ ಬಾಯಿಂದ ಮಾತೇ ಹೊರಡಲಿಲ್ಲ. ಏಕೆಂದರೆ ಅದೇ ಮೊದಲ ಸಲ ಲಕ್ಷ್ಮಿ ಅಕ್ಕನಿಗೆ ಕೋಪ ಬಂದಿದ್ದನ್ನು ನೋಡಿದ್ದು. ಸುಮತಿ ಥಟ್ಟನೆ ಅಲ್ಲಿಂದೆದ್ದು ಒಂದೇ ಉಸುರಿಗೆ ಓಡಿಹೋಗಿ, ಕಾಫಿಗಿಡ ಹತ್ತಿ ಕುಳಿತು ವೆಂಕಟೇಶ್ವರ ಸುಪ್ರಭಾತವನ್ನು ಹಾಡಲು ಪ್ರಾರಂಭಿಸಿದಳು. ಆ ರೀತಿ ಅಲ್ಲಿ ತನ್ನ ಮನಸ್ಸಿಗೆ ಸಾಂತ್ವನ ಲಭಿಸುವವರೆಗೂ ಕುಳಿತಿದ್ದಳು. "ಅಲ್ಲಾ, ಅಕ್ಕನಿಗೇಕೆ ಅಷ್ಟು ಕೋಪ ಬಂದಿದ್ದು ?" ಎಂದು ತಾನು ಮಾಮೂಲಾಗಿ ಮಾತನಾಡಿಸುವ ಗಿಡದ ಕೊಂಬೆ ಗಳನ್ನೂ, ಎಲೆಗಳನ್ನೂ ಪ್ರಶ್ನಿಸಿದಳು....

ಆನಂತರ ತೋಟದಲ್ಲಿದ್ದ ಲಕ್ಷ್ಮಿ ಅಕ್ಕ ತನ್ನನ್ನು 'ಬಾ' ಎಂದು ಕರೆದಾಗ, ನಡೆದದ್ದನ್ನೆಲ್ಲಾ ಮರೆತು ಅವಳ ಬಳಿಗೋಡಿದ್ದಳು ಸುಮತಿ.

"ನನಗೂ ಇಂಗ್ಲಿಷ್ ಓದಬೇಕೆಂದಾಸೆ, ನಾನೂ ಇಂಗ್ಲಿಷ್ ಮೀಡಿಯಂ

ಸ್ಕೂಲಿಗೆ ಹೋಗ್ತೀನಕ್ಕಾ...." ಎಂದು ಲಕ್ಷ್ಮಿ ಅಕ್ಕನನ್ನು ಕೇಳಿದ್ದಳೊಮ್ಮೆ. ಲಕ್ಷ್ಮಿ ಅಕ್ಕ ಪುಸ್ತಕದಿಂದ ತಲೆ ಮೇಲೆತ್ತದೆಯೆ "ಹೋಗಿ ನಮ್ಮ ತಾಯಿಗೆ ಹೇಳು, ಏನೋ ಒಂದು ಮಾಡ್ತಾರೆ" ಎಂದು ಹೇಳಿದ್ದಳು.

ಪ್ರತಿದಿನವೂ ಅಯ್ಯಾರಮ್ಮನ ದಣಿದ ಪಾದಗಳಿಗೆ ಸೇವೆ ಮಾಡುವ ಹೊಣೆ ಪುಟ್ಟ ಸುಮಂತಿಯದೇ ಆಗಿತ್ತು. ತನ್ನ ಎಳೆಯ ಕೈಗಳಿಂದ ಆ ಒರಟಾದ ಪಾದಗಳಿಗೆ ಎಣ್ಣೆ ಹಚ್ಚಿ ತಿಕ್ಕುತ್ತಿದ್ದಳು. ಆ ರೀತಿ ಒಂದು ದಿನ ಆಕೆಯ ಪಾದಗಳಿಗೆ ಎಣ್ಣೆ ಹಚ್ಚಿ ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ತಿಕ್ಕುತ್ತಿದ್ದಾಗ, ಧೈರ್ಯತಂದುಕೊಂಡು ತನ್ನ ಮನಸಿನಲ್ಲಿ ಬಹಳ ದಿನಗಳಿಂದ ಬಚ್ಚಿಟ್ಟುಕೊಂಡಿದ್ದ ಬಯಕೆಯನ್ನು ಅಯ್ಯಾರಮ್ಮನ ಮುಂದಿಟ್ಟಳು.

ಕೂಡಲೇ ಅಯ್ಯಾರಮ್ಮ ದಿಗ್ಗನೆದ್ದು ಕುಳಿತು ಗರ್ಜಿಸಿದಳು. "ಹಾಂ, ಏನೆಂದೇ? ನಿನಗೂ ಡೊನೇಷನ್ ಕಟ್ಟಿ ಕಾನ್ವೆಂಟ್‌ನಲ್ಲಿ ಸೇರಿಸಬೇಕಂತೀಯಾ? ಅಬ್ಬಾ.... ಎಷ್ಟು ಕೊಬ್ಬು ಅಂತೀನಿ.... ಏನೋ ಅಂತ ಸುಮ್ಮನಿದ್ದರೆ ಹದ್ದುಮೀರಿ ಹೋಗ್ತಿದೀಯಲ್ಲಾ! ಹುಷಾರ್.... ಹೂ.... ಕಾಲೊತ್ತು...." ಎಂದು ತಿರಸ್ಕಾರದಿಂದ ಅವಳ ಕಡೆ ನೋಡಿ, ಮತ್ತೆ ಮಲಗಿ ಕಾಲು ಚಾಚಿದಳು... ಮೊದಲ ಬಾರಿಗೆ ಆ ಒರಟು ಪಾದಗಳನ್ನೂ ಆ ಪಾದಗಳ ಮೇಲೆ ಉಬ್ಬಿದ ರಕ್ತನಾಳಗಳನ್ನೂ ನೋಡಿ ಅಸಹ್ಯವುಂಟಾಯಿತು ಸುಮಂತಿಗೆ. ಉಗುರಿಗೆ ಬಣ್ಣ ಹಚ್ಚಿದ್ದರೂ ವಿಕಾರವಾಗಿ ಕಾಣುತ್ತಿದ್ದ ಆ ಪಾದಗಳ ಕಡೆ ಮುಖ ಸಿಂಡರಿಸಿ ನೋಡಿದಳು ಸುಮತಿ....

ಆ ದಿನ ರಾತ್ರಿ ತಾಯಿಯನ್ನು ಕೇಳಿದಳು. "ಏಕಮ್ಮಾ, ಇಂಗ್ಲಿಷ್ ಮೀಡಿಯಂ ಸ್ಕೂಲಿಗೆಗೆ ನನ್ನನ್ನು ಕಳುಹಿಸು ಅಂದರೆ ಅಯ್ಯಾರಮ್ಮ ನನ್ನನ್ನು ಬೈದದ್ದೇಕೆ? ಲಕ್ಷ್ಮಿ ಅಕ್ಕ ಹೋಗುತ್ತಿಲ್ಲವೇ? ನಾನ್ಯಾಕೆ ಹೋಗಬಾರದು? ನಾವೇನಾದರೂ ಇಲ್ಲಿ ಆಳು ಗಳೇನು? ಅಯ್ಯಾರಮ್ಮನ ಕಾಲಿಗೆ ಬೆಳ್ಳಿಯ ಚೈನಿದೆ. ಲಕ್ಷ್ಮಿ ಅಕ್ಕನಿಗೂ ಇದೆ. ನನಗೇಕೆ ಕೊಳ್ಳೊಲ್ಲ ನೀನು? ನನ್ನ ಕಾಲುಗಳು ಕಪ್ಪಗಿವೆ ಅಂತಲೇನಮ್ಮಾ? ಕಪ್ಪು ಕಾಲಿಗೆ ಚೈನು ಹಾಕಿಕೊಂಡರೆ ಚಂದ ಕಾಣುವುದಿಲ್ಲವೆಂದೇ?...."

ಸುಮಂತಿಯ ತಾಯಿ ಉತ್ತರ ಕೊಡಲಿಲ್ಲ, ಮಗಳನ್ನು ಬಾಚಿ ತಬ್ಬಿಕೊಂಡು ಅಳಲಾರಂಭಿಸಿದಳು. ತನ್ನ ಪ್ರಶ್ನೆಗಳಿಂದ ತಾಯಿಗೆ ದುಃಖವಾಯಿತೆಂದು ಮಾತ್ರ ಅರ್ಥವಾಯಿತು ಸುಮತಿಗೆ.

ಅನಂತರ ಒಂದು ದಿನ ತಾಯಿ ಸುಮಂತಿಯೊಂದಿಗೆ "ಸುಮತಿ, ನಾಳೆ ಭಾನುವಾರ ನಾವು ಇಲ್ಲಿಂದ ಹೊರಟುಹೋಗುತ್ತಿದ್ದೇವೆ" ಎಂದಳು.

ಸುಮಂತಿಗೆ ಆಶ್ಚರ್ಯವಾಯಿತು. ಆಶ್ಚರ್ಯದಿಂದ ಅವಳ ಕಣ್ಣು ಇಷ್ಟಗಲ ವಾಯಿತು. "ಎಲ್ಲಿಗೆ ಹೋಗ್ತಿದೀವಮ್ಮಾ ನಾವು!" ಎಂದಳು. ಹುಟ್ಟಿದಾಗಿನಿಂದ ಅದೇ ತಮ್ಮ ಮನೆಯೆಂಬ ಭಾವನೆಯಲ್ಲಿ ಬೆಳೆದಿದ್ದಳವಳು. ಈಗ ಅವರ ತಾಯಿಯ ಮಾತನ್ನು ಕೇಳಿ ದಿಕ್ಕುತೋಚದಂತಾಯಿತು ಅವಳಿಗೆ.

"ಎಲ್ಲಿಗೆ ಹೋಗ್ತಿದೀವಮ್ಮ ?"

"ಎಲ್ಲೋ ಒಂದು ಕಡೆಗೆ...."

"ಅದು ದೊಡ್ಡ ಪಟ್ಟಣವೇನು ?"

"ಅಲ್ಲ, ಅದೊಂದು ಪುಟ್ಟ ಹಳ್ಳಿ...."

"ಅಲ್ಲಿ ಸ್ಕೂಲಿದೆಯೇನಮ್ಮಾ ?"

"ಇಲ್ಲ; ದಿನಾ ಬಸ್ಸಿನಲ್ಲಿ ಹೋಗಿ ಬರಬೇಕು...."

"ಇಲ್ಲಿ ದಿನಾ ನಡೆದುಕೊಂಡೇ ಹೋಗಿಬರ್ತಿದೀನಲ್ಲಾ ! ಹಳ್ಳಿಯಲ್ಲಿ ಸಿನಿಮಾ ನೋಡೋದು ಹೇಗಮ್ಮಾ ? ನನಗೆ ಸ್ನೇಹಿತರು ಸಿಗುತ್ತಾರೇನಮ್ಮಾ ಅಲ್ಲಿ ?"

ಕೊನೆಯಿಲ್ಲದ ಪ್ರಶ್ನೆಗಳು.... ಅವರ ತಾಯಿ ಒಂದು ಪ್ರಶ್ನೆಗೂ ಉತ್ತರ ಕೊಡಲಿಲ್ಲ. ಆಕೆಯಲ್ಲಿ ಉತ್ತರ ಇರಲಿಲ್ಲ ಸಹ....

"ಅಮ್ಮಾ, ಬೆಳ್ಳಿಯ ಚೈನು ಕೇಳಿದೆ ಅಂತ ಇಲ್ಲಿಂದ ಹೊರಟುಹೋಗೋಣ ಅಂತಿದೀಯೇನಮ್ಮ ? ನನಗೇನೂ ಬೇಡಮ್ಮಾ.... ಇಂಗ್ಲಿಷ್ ಮೀಡಿಯಂ ಸ್ಕೂಲು ಕೂಡಾ ಬೇಡಮ್ಮಾ........ ನಾವಿಲ್ಲಿಂದ ಹೋಗೋದುಬೇಡಮ್ಮಾ...." ಸುಮತಿ ಅಳತೊಡಗಿದಳು.

ಅವಳ ತಾಯಿ ಉತ್ತರ ಕೊಡಲಿಲ್ಲ. ಮೌನವಾಗಿ ಬಟ್ಟೆ ಮಡಿಚಿಡತೊಡಗಿದಳು. ಸುಮತಿ ಸ್ವಲ್ಪ ಹೊತ್ತು ಅಲ್ಲಿಯೇ ಕುಳಿತುಕೊಂಡಳು. ಮತ್ತೆ ಏನೂ ಮಾತನಾಡಲಿಲ್ಲ. ಅಲ್ಲಿಯೇ ಹಾಸಿದ್ದ ಚಾಪೆಯ ಮೇಲೆ ಮಲಗಿದಳು. ಕಣ್ಣು ಮುಚ್ಚಿ ಸುಪ್ರಭಾತವನ್ನು ಪಠಿಸಲು ಪ್ರಾರಂಭಿಸಿದಳು. 'ಊರೆಲ್ಲಾ ನಿದ್ರಿಸುತ್ತಿರುವಾಗ ಇದೇನು ?' ಎಂದು ಗಾಬರಿಯಿಂದ ಅವಳ ತಾಯಿ, ಮಗಳ ಬಳಿ ಹೋಗಿ ಆರ್ತತೆಯಿಂದ ಅವಳನ್ನಪ್ಪಿದಳು....

# ಕಾಣದ ಗಾಯ

---

ಮೂಲ (ಹಂಗೇರಿಯನ್) : ಕರೊಲಿ ಕಿಸ್‌ಫಲೂದಿ
ಅನು : ಗೊರೂರು ಶ್ರೀನಿವಾಸಮೂರ್ತಿ

ನಗರದ ಪ್ರಖ್ಯಾತ ಶಸ್ತ್ರವೈದ್ಯ ಅಂದು ಬೆಳಗಿನ ಜಾವ ಹಾಸಿಗೆಯಿಂದ ಏಳುವುದಕ್ಕೆ ಮುಂಚೆಯೇ ಅವನನ್ನು ಕಾಣಲು ಆಗಂತುಕನೊಬ್ಬ ಬಂದ. ತನ್ನನ್ನು ಆ ಕ್ಷಣವೇ ಪರೀಕ್ಷಿಸಬೇಕೆಂದೂ ಒಂದು ನಿಮಿಷವೂ ತಡಮಾಡಕೂಡದೆಂದೂ ಆತ ಹಟ ಹಿಡಿದ. ಶಸ್ತ್ರವೈದ್ಯ ಆತುರದಿಂದ ಪೋಷಾಕು ಧರಿಸಿ ಗಂಟೆ ಬಾರಿಸಿ ಸೇವಕನನ್ನು ಕರೆದು, "ರೋಗಿಯನ್ನು ಒಳಗೆ ಕಳುಹಿಸು" ಎಂದ.

ಒಳಕ್ಕೆ ಪ್ರವೇಶಿಸಿದ ವ್ಯಕ್ತಿ ಸಮಾಜದ ಅತ್ಯುಚ್ಚ ವರ್ಗಕ್ಕೆ ಸೇರಿದವನಂತೆ ಕಾಣುತ್ತಿದ್ದ. ಅವನ ಕಳೆಗುಂದಿದ ಮುಖವನ್ನೂ ಗಾಬರಿಗೊಂಡ ವರ್ತನೆಯನ್ನೂ ನೋಡಿದರೆ ಅವನು ಅತೀವ ದೈಹಿಕ ಯಾತನೆಗೊಳಗಾಗಿದ್ದಾನೆಂಬುದು ತಿಳಿಯುತ್ತಿತ್ತು. ಅವನ ಬಲಗೈಯನ್ನು ತೂಗಿ ಕಟ್ಟಿ ಕುತ್ತಿಗೆಯಿಂದ ಇಳಿಬಿಡಲಾಗಿತ್ತು. ಅವನು ತನ್ನ ಮುಖಭಾವವನ್ನು ಹತೋಟಿಯಲ್ಲಿಟ್ಟುಕೊಂಡಿದ್ದನಾದರೂ ಅವನ ತುಟಿಗಳಿಂದ ನೋವಿನ ನರಳಾಟ ಆಗಾಗ್ಗೆ ಕೇಳಿಬರುತ್ತಿತ್ತು.

"ಕುಳಿತುಕೊಳ್ಳಿ. ನನ್ನಿಂದೇನಾಗಬೇಕು ಹೇಳಿ."

"ಕಳೆದ ಒಂದು ವಾರದಿಂದ ನನಗೆ ನಿದ್ರೆಮಾಡಲು ಸಾಧ್ಯವಾಗಿಲ್ಲ. ನನ್ನ ಬಲಗೈಯಲ್ಲಿ ಏನೋ ತೊಂದರೆಯಿದೆ. ಅದೇನೆಂದು ನನಗೆ ತಿಳಿಯುತ್ತಿಲ್ಲ. ಕ್ಯಾನ್ಸರ್ ಅಥವಾ ಇನ್ನೇನಾದರೂ ಭಯಂಕರ ಖಾಯಿಲೆ ಇದ್ದರೂ ಇರಬಹುದು. ಮೊದಮೊದಲು ನನಗೆ ಅದರಿಂದ ಅಷ್ಟೇನೂ ಕಷ್ಟವಾಗಲಿಲ್ಲ. ಆದರೆ ಈಚೆಗೆ ಉರಿತ ಬಹಳ ಹೆಚ್ಚಾಗಿಬಿಟ್ಟಿದೆ. ಒಂದು ಕ್ಷಣವೂ ಬಿಡುವು ಕೊಡುವುದಿಲ್ಲ. ಆದ್ದರಿಂದಲೇ ನಾನು ಈಗ ನಿಮ್ಮನ್ನು ನೋಡಲು ಬಂದಿರುವುದು. ಇನ್ನೊಂದೇ ಒಂದು ಗಂಟೆ ಈ

ಯಾತನೆಯನ್ನು ಸಹಿಸಬೇಕಾಗಿ ಬಂದರೂ ನನಗೆ ಹುಚ್ಚು ಹಿಡಿದುಬಿಡುತ್ತದೆ. ನೀವು ದಯವಿಟ್ಟು ಇದನ್ನು ಸುಟ್ಟುಹಾಕಿಬಿಡಿ ಅಥವಾ ಕತ್ತರಿಸಿಹಾಕಿಬಿಡಿ. ಇಲ್ಲವೇ ಇನ್ನೇನಾದರೂ ಮಾಡಿ."

ಶಸ್ತ್ರವೈದ್ಯ ಬಹುಶಃ ಶಸ್ತ್ರಕ್ರಿಯೆ ಬೇಕಾಗಲಾರದೆಂದು ಹೇಳಿ ರೋಗಿಯನ್ನು ಸಮಾಧಾನಪಡಿಸಲೆತ್ನಿಸಿದ.

"ಇಲ್ಲ ಇಲ್ಲ" ಆಗಂತುಕ ಒತ್ತಿ ಹೇಳಿದ. "ಇದನ್ನು ಕತ್ತರಿಸಿ ಹಾಕಲೇಬೇಕು. ನಾನು ನಿಮ್ಮ ಬಳಿಗೆ ಬಂದಿರುವುದೇ ಅದಕ್ಕಾಗಿ. ಬೇರೇನು ಮಾಡಿದರೂ ಪ್ರಯೋಜನವಾಗುವುದಿಲ್ಲ."

ತೂಗಿ ಕಟ್ಟಿದ್ದ ತನ್ನ ಕೈಯನ್ನು ಕಷ್ಟಪಟ್ಟು ಕುಣಿಕೆಯಿಂದ ಹೊರತೆಗೆಯುತ್ತಾ ಆತ ಹೇಳಿದ: "ನನ್ನ ಕೈಮೇಲೆ ಗಾಯವೇನೂ ಕಾಣದಿದ್ದರೆ ಆಶ್ಚರ್ಯಪಡಬೇಡಿ. ನನ್ನ ಸಂಗತಿ ಬಹಳ ವಿಚಿತ್ರವಾದದ್ದು, ಅಭೂತಪೂರ್ವವಾದದ್ದು."

ವಿಚಿತ್ರ ಸಂಗತಿಗಳ ಬಗ್ಗೆ ಸೋಜಿಗಗೊಳ್ಳುವ ಅಭ್ಯಾಸ ತನ್ನಲ್ಲಿಲ್ಲವೆಂದು ಶಸ್ತ್ರವೈದ್ಯ ರೋಗಿಗೆ ಭರವಸೆ ನೀಡಿದ. ಆದರೂ ಅವನ ಕೈಯನ್ನು ಹಿಡಿದುಕೊಂಡು ನೋಡಿದ ಕೂಡಲೇ ಅತ್ಯಾಶ್ಚರ್ಯದಿಂದ ಅದನ್ನು ತಟ್ಟನೆ ಕೆಳಕ್ಕೆ ಬಿಟ್ಟುಬಿಟ್ಟ. ಕಾರಣ, ರೋಗಿಯ ಕೈಯಲ್ಲಿ ಬೇನೆಯ ಯಾವ ಲಕ್ಷಣವೂ ಕಾಣದು. ಅದು ನೋಡುವುದಕ್ಕೆ ಬೇರೆ ಯಾವುದೇ ಸಾಮಾನ್ಯವಾದ ಕೈ ಇರುವಂತೆಯೇ ಇತ್ತು. ಬಣ್ಣದಲ್ಲಿ ಕೂಡ ಏನೂ ಹೆಚ್ಚು ಕಡಿಮೆ ಇರಲಿಲ್ಲ. ಆದರೂ ಆ ಮನುಷ್ಯ ಅತಿ ಭಯಂಕರವಾದ ಯಾತನೆಯನ್ನು ಅನುಭವಿಸುತ್ತಿದ್ದಾನೆಂಬುದು ಸ್ಪಷ್ಟವಾಗಿತ್ತು. ವೈದ್ಯ ರೋಗಿಯ ಕೈಯನ್ನು ಕೆಳಕ್ಕೆ ಬಿಟ್ಟಾಗ ಆತ ಆ ಬಲಗೈಯನ್ನು ತನ್ನ ಎಡಗೈಯಿಂದ ಹಿಡಿದುಕೊಂಡ ರೀತಿಯಲ್ಲಿಯೇ ಆ ನೋವಿನ ಉಲ್ಬಣತೆ ಎದ್ದುಕಾಣುತ್ತಿತ್ತು.

"ಯಾವ ಜಾಗದಲ್ಲಿ ನೋಯುತ್ತಿದೆ ?"

ಅವನು ತನ್ನ ಮುಂಗೈನ ಎರಡು ರಕ್ತನಾಳಗಳ ನಡುವೆ ಒಂದು ದುಂಡನೆಯ ಸ್ಥಳವನ್ನು ತೋರಿಸಿದ. ವೈದ್ಯ ಬಹಳ ಎಚ್ಚರಿಕೆಯಿಂದ ತನ್ನ ಬೆರಳ ತುದಿಯಿಂದ ಆ ಸ್ಥಳವನ್ನು ಮುಟ್ಟುತ್ತಲೆ ಅವನು ಕೈಯನ್ನು ಹಟಾತ್ತಾಗಿ ಹಿಂದಕ್ಕೆ ಎಳೆದುಕೊಂಡ.

"ಅಲ್ಲಿಯೇನೇ ನೋಯುತ್ತಿರುವುದು ?"

"ಹೌದು. ಸಹಿಸಲಸಾಧ್ಯವಾದ ನೋವು."

"ನನ್ನ ಬೆರಳನ್ನು ಅದರ ಮೇಲಿಟ್ಟರೆ ನಿಮಗೆ ನನ್ನ ಬೆರಳಿನ ಒತ್ತಡ ತಿಳಿಯುತ್ತದೆಯೇ ?"

ಆಗಂತುಕನಿಗೆ ಉತ್ತರ ಹೇಳಲು ತಿಳಿಯಲಿಲ್ಲ. ಆದರೆ ಅವನ ಕಣ್ಣುಗಳಿಂದ ಹರಿದ ಕಣ್ಣೀರೇ ತನ್ನ ಕತೆಯನ್ನು ಹೇಳುತ್ತಿತ್ತು.

"ಅತ್ಯಾಶ್ಚರ್ಯ ! ನನಗೇನೂ ಕಾಣಿಸುತ್ತಿಲ್ಲವಲ್ಲಾ !"

“ನನಗೂ ಏನೂ ಕಾಣಿಸುವುದಿಲ್ಲ. ಆದರೆ ನೋವು ಮಾತ್ರ ಇದೆ. ಈ ರೀತಿ ಚಿತ್ರಹಿಂಸೆ ಅನುಭವಿಸುವುದಕ್ಕಿಂತ ಸಾಯುವುದೇ ಮೇಲು ಅನ್ನಿಸುತ್ತದೆ.”

ವೈದ್ಯ ಮತ್ತೆ ಕೂಲಂಕಷವಾಗಿ ಪೂರ್ತಿ ಕೈಯನ್ನು ಸೂಕ್ಷ್ಮದರ್ಶಕ ಯಂತ್ರದ ಸಹಾಯದಿಂದ ಪರೀಕ್ಷಿಸಿ, ಅವನ ಮೈ ತಾಪವನ್ನೂ ಗಮನಿಸಿ ಕೊನೆಗೆ ತಲೆಯಾಡಿಸಿದ.

“ಚರ್ಮ ಪೂರ್ಣವಾಗಿ ಆರೋಗ್ಯಕರವಾಗಿದೆ. ರಕ್ತಧಮನಿಗಳು ಸಾಮಾನ್ಯವಾಗಿದೆ. ಎಳ್ಳಷ್ಟೂ ರಕ್ತಗಟ್ಟುವಿಕೆಯಾಗಲೀ ಊತವಾಗಲೀ ಇಲ್ಲ. ಬೇರೆ ಯಾವುದೇ ಸಾಮಾನ್ಯವಾದ ಕೈಯಷ್ಟೇ ಈ ಕೈಯೂ ಸರಿಯಾಗಿದೆ.”

“ಈ ಸ್ಥಳದಲ್ಲಿ ಸ್ವಲ್ಪ ಹೆಚ್ಚು ಕೆಂಪಗಿದೆಯೆಂದು ನನಗೆ ಅನ್ನಿಸುತ್ತಿದೆ.”

“ಎಲ್ಲಿ ?”

ಆಗಂತುಕ ತನ್ನ ಮುಂಗೈ ಮೇಲೆ ಕಾಸಿನಷ್ಟು ಅಗಲದ ಒಂದು ವೃತ್ತವನ್ನು ಮಾಡಿ, “ಇಲ್ಲಿ” ಎಂದು ತೋರಿಸಿದ.

ವೈದ್ಯ ಆಗಂತುಕನ ಕಡೆ ನೋಡಿದ. ಏನಾದರೂ ಮಾನಸಿಕ ಅಸ್ವಸ್ಥತೆಯಿಂದ ನರಳುತ್ತಿರುವವನ ಜೊತೆ ವ್ಯವಹರಿಸಬೇಕಾಗಿ ಬಂದಿದೆಯೋ ಅನ್ನಿಸಿತು ಅವನಿಗೆ.

“ನೀವು ಈ ಊರಿನಲ್ಲೇ ಇರಬೇಕಾಗುತ್ತದೆ. ಮುಂದಿನ ಕೆಲವು ದಿನಗಳಲ್ಲಿ ನಾನು ನಿಮಗೆ ಸಹಾಯ ಮಾಡಲು ಪ್ರಯತ್ನಿಸುತ್ತೇನೆ.”

“ನನ್ನಿಂದ ಒಂದು ನಿಮಿಷವೂ ಕಾಯುವುದು ಸಾಧ್ಯವಿಲ್ಲ.... ಡಾಕ್ಟರ್, ನನ್ನನ್ನು ಹುಚ್ಚನೆಂದೋ ಭ್ರಾಂತಿಯಿಂದ ತೊಳಲುತ್ತಿರುವವನೆಂದೋ ತಿಳಿಯಬೇಡಿ. ಈ ಕಾಣದ ಗಾಯ ನನ್ನನ್ನು ಬಹಳವಾಗಿ ಬಾಧಿಸುತ್ತಿದೆ. ಆ ದುಂಡು ಭಾಗವನ್ನು ಪೂರ್ತಿ ಮೂಳೆಯವರೆಗೆ ಕೊಯ್ದು ತೆಗೆದುಬಿಡಿ.”

“ಇಲ್ಲ. ನಾನು ಖಂಡಿತ ಹಾಗೆ ಮಾಡಲಾರೆ.”

“ಏಕೆ ಡಾಕ್ಟರ್ ?”

“ಏಕೆಂದರೆ ನಿಮ್ಮ ಕೈಗೆ ಏನೂ ಆಗಿಲ್ಲ. ಅದು ನನ್ನ ಕೈಯಷ್ಟೇ ಆರೋಗ್ಯವಾಗಿದೆ.”

“ನಾನು ಹುಚ್ಚ ಎಂದು ನೀವು ಭಾವಿಸಿರುವಂತೆ ಕಾಣುತ್ತದೆ ಅಥವಾ ನಾನು ನಿಮಗೆ ಮೋಸಮಾಡುವೆನೆಂದು ತಿಳಿದಿದ್ದೀರೋ !” ಎಂದು ಹೇಳುತ್ತಾ ರೋಗಿ ತನ್ನ ಪರ್ಸಿನಿಂದ ಸಾವಿರ ರೂಪಾಯಿಗಳನ್ನು ತೆಗೆದು ಮೇಜಿನ ಮೇಲಿಟ್ಟ.

“ಡಾಕ್ಟರ್, ನಾನು ಮನಃಪೂರ್ವಕವಾಗಿ ನಿಮ್ಮನ್ನು ಕೇಳಿಕೊಳ್ಳುತ್ತಿದ್ದೇನೆ. ನಾನು ಸಾವಿರ ರೂಪಾಯಿ ಕೊಡುವುದಕ್ಕೆ ಸಿದ್ಧನಿದ್ದರೆ ಈ ವಿಷಯ ನನಗೆಷ್ಟು ಮುಖ್ಯವಾದುದು ಎಂಬುದನ್ನು ನೀವೇ ತಿಳಿದುಕೊಳ್ಳಿ. ದಯವಿಟ್ಟು ಈ ಆಪರೇಷನ್ ಮಾಡಿಬಿಡಿ.”

“ನೀವು ಪ್ರಪಂಚದಲ್ಲಿರುವ ಹಣವೆಲ್ಲವನ್ನೂ ನನಗೆ ಕೊಟ್ಟರೂ ನಾನು ಆರೋಗ್ಯವಾಗಿರುವ ಯಾವುದೇ ಅಂಗವನ್ನು ಶಸ್ತ್ರದಿಂದ ಮುಟ್ಟುವುದಿಲ್ಲ.”

"ಹಾಗೇಕೆ ಡಾಕ್ಟರ್ ?"

"ಏಕೆಂದರೆ ಅದು ನನ್ನ ವೃತ್ತಿನೀತಿಗೆ ವಿರುದ್ಧವಾದುದು. ಹಾಗೆ ಮಾಡಿದ ಇಡೀ ಪ್ರಪಂಚವೇ ನನ್ನನ್ನು ಮೂರ್ಖನೆಂದು ಕರೆಯುತ್ತದೆ. ಮತ್ತು ಒಬ್ಬ ರೋಗಿಯ ದುರ್ಬಲತೆಯ ದುರುಪಯೋಗಪಡಿಸಿಕೊಂಡನೆಂದು ಹಳಿಯುತ್ತದೆ. ಒಂದು ನೋವಿನ ಮೂಲವನ್ನು ಕಂಡುಹಿಡಿಯಲಾರದೆ ಆ ಭಾಗವನ್ನೇ ಕತ್ತರಿಸಿ ಹಾಕಿದನೆಂದು ಆಪಾದಿಸುತ್ತದೆ."

"ಒಳ್ಳೆಯದು. ಹಾಗಾದರೆ ನೀವು ನನಗೊಂದು ಕೃಪೆಮಾಡಿ. ನನ್ನ ಆಪರೇಶನ್ ನಾನೇ ಮಾಡಿಕೊಳ್ಳುತ್ತೇನೆ. ನನ್ನ ಎಡಗೈ ಇಂತಹ ಕೆಲಸಗಳಲ್ಲಿ ನುರಿತಿಲ್ಲದಿದ್ದರೂ ಪರವಾಗಿಲ್ಲ. ಆದರೆ ನಾನು ಕೇಳಿಕೊಳ್ಳುವುದಿಷ್ಟೇ. ನಾನು ಆಪರೇಶನ್ ಮಾಡಿಕೊಂಡಾಗ ಆಗುವ ಗಾಯಕ್ಕೆ ನೀವು ಸ್ವಲ್ಪ ಚಿಕಿತ್ಸೆ ಮಾಡಿಬಿಡಿ."

ಹೀಗೆ ಹೇಳಿ ಆಗಂತುಕ ತನ್ನ ಕೋಟನ್ನು ಬಿಚ್ಚಿ ತೆಗೆದು ಅಂಗಿಯ ತೋಳ ತುದಿಯನ್ನು ಮಡಿಚಿಕೊಂಡದ್ದನ್ನು ನೋಡಿದಾಗ ವೈದ್ಯನಿಗೆ ಅತಿ ವಿಸ್ಮಯವಾದರೂ, ಈ ವ್ಯಕ್ತಿ ನಿಜವಾಗಿ ಈ ವಿಷಯದಲ್ಲಿ ಖಚಿತವಾದ ಉದ್ದೇಶ ಹೊಂದಿದ್ದಾನೆಂಬುದರ ಅರಿವಾಯಿತು. ಆಗಂತುಕ ತನ್ನ ಜೇಬಿನಿಂದಲೇ ಒಂದು ಚಾಕುವನ್ನೂ ಸಹ-ಬೇರೇನೂ ಆಯುಧ ಇಲ್ಲದುದರಿಂದ–ತೆಗೆದ. ವೈದ್ಯ ಅವನನ್ನು ತಡೆಯುವ ಮೊದಲೇ ಅವನು ಚಾಕುವಿನಿಂದ ತನ್ನ ಮುಂಗೈಗೆ ಆಳವಾಗಿ ಚುಚ್ಚಿಕೊಂಡ.

"ತಾಳಿ, ತಾಳಿ" ಎಂದು ಕೂಗಿದ ವೈದ್ಯ. ರೋಗಿ ಎಲ್ಲಾದರೂ ರಕ್ತನಾಳವನ್ನೆ ಕೊಯ್ದುಕೊಂಡುಬಿಟ್ಟಾನೆಂದು ಅವನಿಗೆ ಗಾಬರಿಯಾಯಿತು.

"ಸರಿ, ನೀವು ಆ ಭಾಗವನ್ನು ಕತ್ತರಿಸಿಯೇ ತೀರಬೇಕು ಎಂಬ ನಂಬಿರುವುದರಿಂದ ನಾನೇ ಆ ಕೆಲಸ ಮಾಡುತ್ತೇನೆ ತಡೆಯಿರಿ."

ವೈದ್ಯ ಅಪರೇಶನ್‌ಗೆ ಸಿದ್ಧತೆ ಮಾಡಿದ. ಸ್ವಂತ ರಕ್ತ ಸುರಿವುದನ್ನು ನೋಡಿ ಗಾಬರಿಯಾಗದಿರಲೆಂದು, ತನ್ನ ಮುಖವನ್ನು ಬೇರೆ ಕಡೆಗೆ ತಿರುಗಿಸಿಕೊಳ್ಳುವಂತೆ ರೋಗಿಗೆ ಹೇಳಿದ.

"ಅದೇನೂ ಆವಶ್ಯಕವಿಲ್ಲ" ಎಂದ ಆತ. "ಸರಿಯಾಗಿ ಎಲ್ಲಿಯವರೆಗೆ ಕತ್ತರಿಸಬೇಕೆಂದು ನಾನು ನಿಮಗೆ ನಿರ್ದೇಶನ ಕೊಡಬೇಕು."

ರೋಗಿ ಆಪರೇಶನ್‌ನ್ನು ವಿರಕ್ತಿಯಿಂದ ಮಾಡಿಸಿಕೊಂಡನಲ್ಲದೆ ವೈದ್ಯನಿಗೂ ಸೂಕ್ತ ನಿರ್ದೇಶನಗಳನ್ನಿತ್ತು ಸಹಕರಿಸಿದ. ದುಂಡನೆಯ ಭಾಗವನ್ನು ಪೂರ್ತಿಯಾಗಿ ಕೊಯ್ದು ಹಾಕಿದ ಮೇಲೆ ಸುಖವಾಗಿ ಹಾಯೆಂದು ನಿಟ್ಟುಸಿರು ಬಿಟ್ಟ ತನ್ನ ತಲೆಯ ಮೇಲಿನ ಭಾರ ಇಳಿಯಿತೋ ಎಂಬಂತೆ.

"ಈಗ ನೋವೇನೂ ಕಾಣುತ್ತಿಲ್ಲವೋ ?" ಎಂದು ಕೇಳಿದ ವೈದ್ಯ.

"ಸ್ವಲ್ಪವೂ ನೋವಿಲ್ಲ. ಆ ನೋವನ್ನೇ ಕತ್ತರಿಸಿ ಎಸೆದುಬಿಟ್ಟಿರೋ ಎನ್ನುವ ಹಾಗಿದೆ, ಕತ್ತರಿಸಿದ ಜಾಗದಲ್ಲಿ ಸ್ವಲ್ಪ ನವೆ ಇದೆ. ಆದರೆ ಅದು ಬಾಗಿಲು ಆರಿದ

ಮೇಲೆ ಬೀಸಿದ ತಂಗಾಳಿಯಂತೆ ತೋರುತ್ತಿದೆ. ರಕ್ತ ಹರಿಯಲಿ ಬಿಡಿ. ಅದರಿಂದ ನನಗೆ ಸಾಂತ್ವನ ದೊರೆಯುತ್ತದೆ."

ಗಾಯಕ್ಕೆ ಪಟ್ಟಿ ಹಾಕಿ ಕಟ್ಟಿದ ಮೇಲೆ ರೋಗಿ ಸಂತೋಷಗೊಂಡು ತೃಪ್ತಿಯನ್ನು ಸೂಚಿಸಿದ. ಈಗ ಆತ ಹೊಸ ಮನುಷ್ಯನಾಗಿದ್ದ. ವೈದ್ಯನ ಬಲಗೈಯನ್ನು ತನ್ನ ಎಡಗೈಯಿಂದ ಒತ್ತಿ, "ನಾನು ನಿಮಗೆ ನಿಜವಾಗಿ ಬಹಳ ಕೃತಜ್ಞ" ಎಂದ.

ಇದಾದ ಮೇಲೆ ಶಸ್ತ್ರವೈದ್ಯ ರೋಗಿ ಇಳಿದುಕೊಂಡಿದ್ದ ಹೋಟೆಲಿಗೆ ಅನೇಕ ಬಾರಿ ಹೋಗಿ ಅವನನ್ನು ನೋಡಿದ. ಸಮಾಜದ ಉತ್ತಮ ಅಂತಸ್ತಿಗೆ ಸೇರಿದ ಅವನಲ್ಲಿ ವೈದ್ಯನಿಗೆ ಗೌರವ ಉಂಟಾಗತೊಡಗಿತು. ಅವನು ವಿದ್ಯಾವಂತನೂ ಸುಸಂಸ್ಕೃತನೂ ಕುಲೀನನೂ ಆಗಿದ್ದ. ಗಾಯ ಪೂರ್ತಿಯಾಗಿ ವಾಸಿಯಾದ ಮೇಲೆ ಆತ ತನ್ನ ಹಳ್ಳಿವಾಡದ ಮನೆಗೆ ಹಿಂದಿರುಗಿದ.

ಮೂರು ವಾರಗಳ ಮೇಲೆ ಆತ ಶಸ್ತ್ರವೈದ್ಯನ ಬಳಿಗೆ ಮತ್ತೆ ಬಂದ. ಅವನ ಕೈ ಪುನಃ ಕುಣಿಕೆಯಲ್ಲಿ ತೂಗಾಡುತ್ತಿತ್ತು. ಅವನ ಮುಖ ಮೇಣದಂತೆ ನಿಸ್ತೇಜವಾಗಿತ್ತು. ಹಣೆಯ ಮೇಲೆ ಬೆವರು ಹನಿಯುತ್ತಿತ್ತು. ಆರಾಮ ಕುರ್ಚಿಯೊಂದರಲ್ಲಿ ಕುಸಿದು ಮಾತನಾಡದೆ ತನ್ನ ಬಲಗೈಯನ್ನು ಡಾಕ್ಟರ ಮುಂದೆ ನೀಡಿದ.

"ಬನ್ನಿ ಬನ್ನಿ. ಈಗೇನಾಯಿತು ?"

"ನೀವು ಇದನ್ನು ಸಾಕಷ್ಟು ಆಳವಾಗಿ ಕತ್ತರಿಸಲಿಲ್ಲ." ಅವನು ನರಳುತ್ತಾ ಹೇಳಿದ. "ನೋವು ಮರುಕಳಿಸಿತು. ಈ ಬಾರಿ ಹಿಂದಿನ ಸಲಕ್ಕಿಂತ ಕೇಡು. ಪ್ರಾಣವೇ ಹೋಗುತ್ತಿದೆ. ನಿಮಗೆ ಮತ್ತೆ ತೊಂದರೆ ಕೊಡುವುದಕ್ಕೆ ನನಗೆ ಇಷ್ಟವಿರಲಿಲ್ಲ. ಆದ್ದರಿಂದ ಇಷ್ಟು ದಿನ ಈ ನೋವನ್ನು ಸಹಿಸಿಕೊಂಡೆ. ಆದರೆ ಇನ್ನು ಸಹಿಸುವುದು ಸಾಧ್ಯವಿಲ್ಲ. ನೀವು ಪುನಃ ಆಪರೇಷನ್ ಮಾಡಬೇಕು."

ಶಸ್ತ್ರವೈದ್ಯ ಆ ಸ್ಥಳವನ್ನು ಮತ್ತೆ ಪರೀಕ್ಷಿಸಿದ. ಹಿಂದೆ ಮಾಡಿದ್ದ ಆಪರೇಷನ್ ಪೂರ್ತಿ ಮಾಗಿ ಹೊಸ ಚರ್ಮ ಬೆಳೆದಿತ್ತು. ರಕ್ತಧಮನಿಗಳು ತಮ್ಮ ಸ್ಥಾನದಲ್ಲಿ ಸರಿಯಾಗಿದ್ದವು. ನಾಡಿಯಲ್ಲಿ ಏನೂ ಊನವಿರಲಿಲ್ಲ. ಜ್ವರ ಇರಲಿಲ್ಲ. ಆದರೂ ನೋವಿನಿಂದ ಅವನ ಶರೀರ ನಡುಗುತ್ತಿತ್ತು.

"ನನ್ನ ಅನುಭವದಲ್ಲಿ ಹಿಂದೆಂದೂ ಈ ರೀತಿಯ ವಿಚಿತ್ರವನ್ನು ಕೇಳಿದ್ದೂ ಇಲ್ಲ, ನೋಡಿದ್ದೂ ಇಲ್ಲ" ಎಂದ ವೈದ್ಯ.

ಪುನಃ ಆಪರೇಶನ್ ಮಾಡುವುದಲ್ಲದೆ ಬೇರೆ ದಾರಿಯಿರಲಿಲ್ಲ. ಹಿಂದಿನಂತೆಯೇ ಈ ಸಲವೂ ಎಲ್ಲವೂ ನಡೆಯಿತು. ಆಪರೇಶನ್ ಆದಮೇಲೆ ನೋವು ಪೂರ್ತಿಯಾಗಿ ಮಾಯವಾಗಿ ರೋಗಿಗೆ ಹಾಯೆನಿಸಿದರೂ ಈ ಸಲ ಅವನ ತುಟಿಗಳಲ್ಲಿ ಮುಗುಳುನಗೆ ಬರಲಿಲ್ಲ. ಅವನು ವೈದ್ಯನಿಗೆ ಧನ್ಯವಾದಗಳನ್ನರ್ಪಿಸಿದಾಗ ಅವನ ಮುಖಭಾವ ಕಳೆಗುಂದಿ ದುಃಖಪೂರ್ಣವಾಗಿತ್ತು.

"ನಾನು ಇನ್ನೊಂದು ತಿಂಗಳಲ್ಲಿ ಮತ್ತೊಮ್ಮೆ ಬಂದರೆ ಆಶ್ಚರ್ಯಪಡಬೇಡಿ" ಎಂದ ಅವನು ಹೊರಡುತ್ತಾ.

"ಹಾಗೆ ಯೋಚಿಸಬೇಡಿ. ಎಲ್ಲಾ ಸರಿಹೋಗುತ್ತೆ."

"ಮೇಲೆ ದೇವರಿರುವಷ್ಟೇ ಖಚಿತ ಈ ನೋವು ಹಿಂದಿರುಗುವುದು. ಹೋಗಿ ಬರುತ್ತೇನೆ, ನಮಸ್ಕಾರ" ಎಂದು ಶಾಂತಸ್ವರದಲ್ಲಿ ಹೇಳಿ ಆತ ಹೊರಟುಹೋದ.

ಶಸ್ತ್ರವೈದ್ಯ ತನ್ನ ಅನೇಕ ಸಹೋದ್ಯೋಗಿಗಳೊಡನೆ ಈ ವಿಷಯವನ್ನು ಪ್ರಸ್ತಾಪಿಸಿ ಚರ್ಚೆ ಮಾಡಿದ. ಒಬ್ಬೊಬ್ಬರೂ ಒಂದೊಂದು ಅಭಿಪ್ರಾಯ ಕೊಟ್ಟರು. ಅಂತೂ ಯಾರಿಂದಲೂ ಸಮರ್ಪಕವಾದ ವಿವರಣೆ ಬರಲಿಲ್ಲ.

ಒಂದು ತಿಂಗಳು ಕಳೆಯಿತು. ರೋಗಿ ಮತ್ತೆ ಬರಲಿಲ್ಲ. ಇನ್ನೂ ಕೆಲವು ವಾರಗಳು ಕಳೆದ ಮೇಲೆ, ರೋಗಿಯ ಬದಲು ಅವನ ಊರಿನಿಂದ ಒಂದು ಪತ್ರ ಬಂತು. ನೋವು ಮರುಕಳಿಸಿಲ್ಲವೆಂದು ಊಹಿಸಿ ಶಸ್ತ್ರವೈದ್ಯ ಸಂತೋಷದಿಂದ ಪತ್ರವನ್ನು ಬಿಚ್ಚಿ ಓದಿದ. ಪತ್ರ ಹೀಗಿತ್ತು :

"ಪ್ರಿಯ ಡಾಕ್ಟರ್,

"ನನ್ನ ಬೇನೆಯ ಬಗ್ಗೆ ನಾನು ನಿಮ್ಮನ್ನು ಸಂದೇಹ ಸ್ಥಿತಿಯಲ್ಲಿಡಬಯಸು ವುದಿಲ್ಲ. ಹಾಗೂ ಆ ರಹಸ್ಯವನ್ನು ನನ್ನ ಸಮಾಧಿಯೊಳಕ್ಕಾಗಲೀ ಬೇರೆಲ್ಲಿಗೇ ಆಗಲಿ ನನ್ನೊಡನೆ ಕೊಂಡೊಯ್ಯಲೂ ಇಷ್ಟಪಡುವುದಿಲ್ಲ. ನನ್ನ ಭಯಾನಕ ರೋಗದ ಕತೆಯನ್ನು ನಾನು ನಿಮಗೆ ತಿಳಿಸಬೇಕು. ಈಗಾಗಲೇ ಅದು ಮೂರು ಬಾರಿ ಮರುಕಳಿಸಿದೆ. ಅದರ ವಿರುದ್ಧ ಹೋರಾಡುತ್ತಾ ಹೋಗುವ ಉದ್ದೇಶ ನನಗಿಲ್ಲ. ಒಳಗಿನಿಂದ ದಹಿಸುತ್ತಿರುವ ಈ ಗಾಯವನ್ನು ತಣ್ಣಗಾಗಿಸಲು ಅದರ ಮೇಲೆ ಜ್ವಲಿಸು ತ್ತಿರುವ ಕಲ್ಲಿದ್ದಿಲಿನ ಚೂರೊಂದನ್ನು ಇಟ್ಟುಕೊಂಡು ಮಾತ್ರ ಈ ಕಾಗದವನ್ನು ಬರೆ ಯಲು ನಾನು ಶಕ್ತನಾಗಿದ್ದೇನೆ.

"ಆರು ತಿಂಗಳ ಹಿಂದೆ ನಾನೊಬ್ಬ ಅತ್ಯಂತ ಸುಖಿಯಾದ ಮನುಷ್ಯನಾಗಿದ್ದೆ. ಶ್ರೀಮಂತನಾಗಿದ್ದು ತೃಪ್ತನಾಗಿದ್ದೆ. ಮೂವ್ವತ್ತೈದು ವರ್ಷ ವಯಸ್ಸಿನ ಒಬ್ಬ ವ್ಯಕ್ತಿಗೆ ಜೀವನದ ಏನೇನು ವಿಷಯದಲ್ಲಿ ಆಸ್ಥೆ ಇರುವುದೋ ಅವೆಲ್ಲವನ್ನೂ ಹೊಂದಿ ಸಂತೋಷಚಿತ್ತನಾಗಿದ್ದೆ. ಒಂದು ವರ್ಷದ ಕೆಳಗೆ ನನ್ನ ವಿವಾಹ ಆಯಿತು. ಪ್ರೇಮ ವಿವಾಹ. ಅತಿ ಸುಂದರಿಯೂ, ಮೃದು ಹೃದಯದವಳೂ, ಸುಸಂಸ್ಕೃತಳೂ ಆದ ಯುವತಿಯೊಬ್ಬಳು ನನ್ನ ಹೆಂಡತಿಯಾದಳು. ಅವಳು ನಾನಿದ್ದ ಕಡೆಯಿಂದ ಸ್ವಲ್ಪವೇ ದೂರದಲ್ಲಿದ್ದ ದೊರೆಸಾನಿಯೊಬ್ಬಳಿಗೆ 'ಸಖಿ'ಯಾಗಿದ್ದಳು. ಅವಳಿಗೆ ನನ್ನಲ್ಲಿ ಅಸೀಮ ಪ್ರೇಮವಿತ್ತು. ಅವಳ ಹೃದಯ ನನ್ನ ಬಗ್ಗೆ ಕೃತಜ್ಞತೆಯಿಂದ ತುಂಬಿತುಳುಕುತ್ತಿತ್ತು. ವಿವಾಹವಾದ ಆರು ತಿಂಗಳ ಕಾಲ ಬಹಳ ಸಂತೋಷದಿಂದ ಕಳೆಯಿತು. ಪ್ರತಿದಿನವೂ ಹಿಂದಿನ ದಿನಕ್ಕಿಂತ ಹೆಚ್ಚು ಆನಂದವನ್ನು ತರುತ್ತಿತ್ತು. ನಾನು ಹೊರಪಟ್ಟಣಕ್ಕೆ ಹೋಗಿ ಹಿಂದಿರುಗುವಾಗ ಅವಳು ನನ್ನನ್ನು ಸಂಧಿಸಲು ಹೆದ್ದಾರಿಯಲ್ಲಿ ಮೈಲಿಗಟ್ಟಲೆ

ನಡೆದು ಬರುತ್ತಿದ್ದಳು. ತನ್ನ ಹಿಂದಿನ ಒಡತಿಯ ಮನೆಗೆ ಆಗಾಗ್ಗೆ ಹೋಗುತ್ತಿದ್ದರೂ ಅಲ್ಲಿ ಕೆಲವು ಗಂಟೆಗಳಿಗಿಂತ ಹೆಚ್ಚಿಗೆ ಇರುತ್ತಿರಲಿಲ್ಲ. ಅವಳಿಗೆ ನನ್ನಲ್ಲಿದ್ದ ಪ್ರೀತಿಯನ್ನು ಕಂಡು ಅವಳ ಹೆಂಗೆಳೆಯರೆಲ್ಲಾ ಕರುಬುತ್ತಿದ್ದರು. ಅವಳು ನನ್ನ ಹೊರತು ಇನ್ಯಾರ ಜೊತೆಯಲ್ಲೂ ಎಂದೂ ಓಡಾಡಿದುದಿಲ್ಲ. ಅವಳ ಕನಸಿನಲ್ಲಿ ಕೂಡ ಯಾರಾದರೂ ಪರಪುರುಷ ಬಂದುಬಿಟ್ಟರೆ ಅದೇ ತನ್ನ ದೊಡ್ಡ ಅಪರಾಧವೋ ಎಂಬಂತೆ ನನ್ನ ಬಳಿ ಬಂದು ತಪ್ಪೊಪ್ಪಿಕೊಳ್ಳುತ್ತಿದ್ದಳು. ಅವಳು ನಿರ್ಮಲ ಮನಸ್ಸಿನ ಮುದ್ದು ಮಗುವಿನಂತಿದ್ದಳು.

"ಆದರೆ ಇದೆಲ್ಲವೂ ಬರಿಯ ನಟನೆ ಎಂಬ ಭಾವನೆ ನನ್ನ ಮನಸ್ಸಿನೊಳಗೆ ಏಕೆ ಹುಟ್ಟಿತೋ ಹೇಳಲಾರೆ. ಅತಿಯಾದ ಸುಖದ ನಡುವೆ ದುಃಖವನ್ನೂ ಕ್ಲೇಶವನ್ನೂ ಹುಡುಕುವ ಮೂರ್ಖತನ ಮನುಷ್ಯನ ಸ್ವಭಾವದಲ್ಲೇ ಇದೆಯೆಂದು ಕಾಣುತ್ತದೆ.

"ನನ್ನ ಪತ್ನಿಯ ಬಳಿ ಒಂದು ಸಣ್ಣ ಹೊಲಿಗೆಯ ಯಂತ್ರ ಇತ್ತು. ಅದರ ಕಪಾಟಿಗೆ ಅವಳು ಯಾವಾಗಲೂ ಬೀಗ ಹಾಕಿಡುತ್ತಿದ್ದಳು. ಈ ವಿಷಯ ನನ್ನಲ್ಲಿ ಚಿತ್ರಹಿಂಸೆ ಉಂಟುಮಾಡತೊಡಗಿತು. ಅವಳು ಎಂದೂ ಕಪಾಟಿನಲ್ಲೇ ಬೀಗದ ಕೈಯನ್ನು ಬಿಡುತ್ತಿರಲಿಲ್ಲ. ಅಥವಾ ಅದಕ್ಕೆ ಬೀಗ ಹಾಕದೆಯೂ ಇರುತ್ತಿರಲಿಲ್ಲ. ಇಷ್ಟು ಜಾಗರೂಕತೆಯಿಂದ ಅವಳು ಮುಚ್ಚಿಡುವುದು ಏನಿದ್ದಿರಬಹುದು ಎಂಬ ವಿಷಯ ನನ್ನನ್ನು ಕಾಡತೊಡತು. ನಾನು ಮತ್ಸರದಿಂದ ಹುಚ್ಚನಂತಾದೆ. ಅವಳ ನಿರ್ದೋಷವಾದ ಕಣ್ಣುಗಳನ್ನೂ ಪ್ರೇಮಭರಿತ ಚುಂಬನ ಆಲಿಂಗನಗಳನ್ನೂ ನಾನು ನಂಬದವನಾದೆ. ಬಹುಶಃ ಅದೆಲ್ಲವೂ ಕಪಟನಾಟಕವೆಂದು ನನಗೆ ಅನ್ನಿಸಿತು.

"ಒಂದು ದಿನ ದೊರಸಾನಿ ನನ್ನ ಹೆಂಡತಿಯನ್ನು ತನ್ನೊಡನೆ ಕರೆದುಕೊಂಡು ಹೋಗಲು ಬಂದಳು. ಆ ದಿನ ಮಧ್ಯಾಹ್ನವನ್ನು ತನ್ನ ಜೊತೆಯಲ್ಲೇ ಕಳೆಯಬೇಕೆಂದು ಅವಳು ನನ್ನ ಪತ್ನಿಯನ್ನು ಒಪ್ಪಿಸಿದಳು. ನಾನೂ ಸಹ ಸಂಜೆಯ ವೇಳೆಗೆ ಅಲ್ಲಿಗೇ ಬರುವುದಾಗಿ ಮಾತು ಕೊಟ್ಟೆ.

"ಗಾಡಿಯಲ್ಲಿ ಕುಳಿತು ಅವರು ಹೊರಟೊಡನೆಯೇ ನಾನು ಒಳಕ್ಕೆ ಬಂದು ಹೊಲಿಗೆ ಯಂತ್ರದ ಕಪಾಟಿನ ಬೀಗವನ್ನು ತೆಗೆಯಲು ಪ್ರಯತ್ನಿಸಿದೆ. ಅನೇಕ ಬೀಗದ ಕೈಗಳನ್ನು ಉಪಯೋಗಿಸಿ ಕೊನೆಗೆ ಕಪಾಟನ್ನು ತೆರೆಯುವುದರಲ್ಲಿ ಸಫಲನಾದೆ. ಒಳಗೆ ಒಂದು ರೇಶಿಮೆಯ ಕೈಚೀಲದಲ್ಲಿ ಸೌಂದರ್ಯಸಾಧನಗಳ ಮಧ್ಯೆ ಇಟ್ಟಿದ್ದ ಪತ್ರಗಳ ಕಟ್ಟೊಂದು ನನ್ನ ಕೈಗೆ ಸಿಕ್ಕಿತು. ನೋಡಿದೊಡನೆಯೇ ಅದೇನೆಂದು ತಿಳಿಯುತ್ತಿತ್ತು. ಅವು ಪ್ರೇಮಪತ್ರಗಳು. ಒಂದು ಗುಲಾಬಿ ಬಣ್ಣದ ಟೇಪಿನಿಂದ ಒಟ್ಟಿಗೆ ಕಟ್ಟಿ ಇಡಲಾಗಿತ್ತು.

"ನನ್ನ ಪತ್ನಿಯ ಕಿಶೋರಾವಸ್ಥೆಯ ರಹಸ್ಯಗಳನ್ನು ಕೆದಕಿ ತಿಳಿಯುವಂತಹ ಅಯೋಗ್ಯ ಕೆಲಸವನ್ನು ಮಾಡುವುದು ನನ್ನ ಘನತೆಗೆ ತಕ್ಕುದಲ್ಲವೆಂದು ಯೋಚಿಸು

ವಷ್ಟು ತಾಳ್ಮೆ ಆ ಸಮಯದಲ್ಲಿ ನನಗಿರಲಿಲ್ಲ. ಯಾವುದೋ ಅಜ್ಞಾತ ಶಕ್ತಿ ಈ ನನ್ನ ಅನ್ವೇಷಣೆಯನ್ನು ಮುಂದುವರಿಸುವಂತೆ ನನ್ನನ್ನು ಪ್ರಚೋದಿಸುತ್ತಿತ್ತು. ಬಹುಶಃ ಈ ಪತ್ರಗಳು ಇನ್ನೂ ಈಚಿನ ಕಾಲಕ್ಕೆ – ನಮ್ಮ ವಿವಾಹಾನಂತರದ ಸಮಯಕ್ಕೆ – ಸಂಬಂಧಿಸಿರಬಹುದೋ ಎಂದು ಅನುಮಾನಿಸುತ್ತಾ ಟೇಪನ್ನು ಬಿಚ್ಚಿ ಒಂದೊಂದು ಪತ್ರವನ್ನೂ ನಾನು ಓದಿದೆ.

"ಅದು ನನ್ನ ಜೀವಮಾನದ ಅತ್ಯಂತ ದಾರುಣ ಗಳಿಗೆಯಾಗಿತ್ತು.

"ಆ ಪತ್ರಗಳು ಯಾವನೇ ಒಬ್ಬ ವ್ಯಕ್ತಿಯ ವಿರುದ್ಧವಾಗಿ ಎಸಗಲಾದ ಅಕ್ಷಮ್ಯ ದ್ರೋಹದ ಕತೆಯನ್ನು ಸಾರಿ ಹೇಳುತ್ತಿದ್ದವು. ಅವುಗಳನ್ನು ಬರೆದಾತ ನನ್ನ ಆತ್ಮಾಪ್ತ ಮಿತ್ರನೊಬ್ಬ. ಅವುಗಳ ಧ್ವನಿ...ಅದರಲ್ಲಿ ಎಂತಹ ಮೃದು ಮಧುರವಾದ ಪ್ರೇಮಭಾವ ಹಾಗೂ ಗಾಢವಾದ ಆತ್ಮೀಯತೆ ಅಡಗಿತ್ತು! ಅವನು ಏನೆಲ್ಲ ರೀತಿಯಲ್ಲಿ ರಹಸ್ಯತೆಯ ಬಗ್ಗೆ ಅವಳಿಗೆ ಒತ್ತಿ ಹೇಳಿದ್ದ! ಮೂರ್ಖ ಗಂಡಂದಿರ ಬಗ್ಗ ಏನೆಲ್ಲ ಕುಚೋದ್ಯ ಮಾಡಿ ಬರೆದಿದ್ದ! ತನ್ನ ಗಂಡನನ್ನು ಅಜ್ಞನನ್ನಾಗಿರಿಸುವುದಕ್ಕೆ ಏನೆಲ್ಲ ಯುಕ್ತಿಗಳನ್ನು ಅವಳು ಅನುಸರಿಸಬೇಕೆಂದು ತಿಳಿವಳಿಕೆ ನೀಡಿದ್ದ! ಪ್ರತಿಯೊಂದು ಪತ್ರವೂ ನಮ್ಮ ವಿವಾಹಾನಂತರದ ತಾರೀಖಿನಲ್ಲೇ ಬರೆದದ್ದು. ಇಲ್ಲಿ ನಾನು ನನ್ನನ್ನೇ ಜಗತ್ತಿನಲ್ಲೆಲ್ಲಾ ಅತ್ಯಂತ ಸುಖಿಯಾದ ಮನುಷ್ಯ ಎಂದು ತಿಳಿದಿದ್ದೆ. ಪತ್ರಗಳನ್ನು ಓದಿದಾಗ ನನ್ನ ಮನಸ್ಸಿನಲ್ಲಿ ಉಂಟಾದ ಭಾವನೆಗಳನ್ನು ವಿವರಿಸುವುದಕ್ಕೆ ನನಗೆ ಇಷ್ಟವಿಲ್ಲ. ಆ ವಿಷದ ಬಟ್ಟಲನ್ನು ನಾನು ಕೊನೆಯ ತೊಟ್ಟಿನವರೆಗೆ ಕುಡಿದೆ. ಅನಂತರ ಆ ಪತ್ರಗಳನ್ನು ಮಡಿಸಿ ಕಟ್ಟಿ ಅವುಗಳ ಗುಪ್ತಸ್ಥಾನಕ್ಕೆ ಹಿಂತಿರುಗಿಸಿ ಕಪಾಟನ್ನು ಮುಚ್ಚಿ ಬೀಗ ಹಾಕಿದೆ.

"ನಾನು ದೊರೆಸಾನಿಯ ಮಹಲಿಗೆ ಹೋಗದೆಯೇ ಇದ್ದರೆ ನನ್ನ ಪತ್ನಿ ಸಂಜೆ ನನ್ನ ಮನೆಗೇ ಹಿಂದಿರುಗುವಳೆಂದು ನನಗೆ ತಿಳಿದಿತ್ತು. ಆದದ್ದೂ ಹಾಗೆಯೇ. ಅವಳು ಗಾಡಿಯಿಂದಿಳಿದು ಓಡಿಬಂದು ಪರಮಪ್ರೀತಿಯನ್ನು ತೋರುತ್ತಾ ನನ್ನನ್ನು ಆಲಿಂಗಿಸಿ ಚುಂಬಿಸಿದಳು. ನಾನು ಮನಸ್ಸಿನ ಉದ್ವೇಗವನ್ನು ತೋರಗೊಡದೆ ಸಾಮಾನ್ಯವಾಗಿದ್ದೆ.

"ರಾತ್ರಿ ನಾವು ಹರಟೆ ಹೊಡೆದು, ಒಟ್ಟಿಗೆ ಊಟ ಮಾಡಿ, ನಮ್ಮ ಎಂದಿನ ಪದ್ಧತಿಯಂತೆ ಬೇರೆ ಬೇರೆ ಕೋಣೆಯೊಳಗೆ ಮಲಗಿದೆವು. ಆ ವೇಳೆಗಾಗಲೇ ನಾನು ಮಾಡಬೇಕಾದ ಕೆಲಸವನ್ನು ತೀರ್ಮಾನಿಸಿಕೊಂಡಿದ್ದೆ, ಆ ಕೆಲಸವನ್ನು ನಾನು ಹುಚ್ಚು ಮನಸ್ಸಿನ ಹಠದಿಂದ ನೆರವೇರಿಸುವವನಿದ್ದೆ. ಇಂತಹ ಸೌಂದರ್ಯದ ಜೊತೆಯಲ್ಲೇ ಪಾಪಬುದ್ಧಿಯನ್ನೂ ನೀಡಿ ಪ್ರಕೃತಿ ಎಂತಹ ಕ್ರೂರ ವಂಚನೆಗೈದಿದೆ ಎಂದು ನನಗೆ ನಾನೇ ಹೇಳಿಕೊಳ್ಳುತ್ತಾ ಅರ್ಧರಾತ್ರಿಯಲ್ಲಿ ಅವಳ ಕೊಠಡಿಯನ್ನು ಪ್ರವೇಶಿಸಿದೆ. ಮಲಗಿ ನಿದ್ರೆ ಮಾಡುತ್ತಿದ್ದ ಅವಳ ನಿರ್ದೋಷ ಮುಖವನ್ನು ನೋಡಿದೆ. ನನ್ನೊಳಗೆ ತುಂಬಿದ್ದ ವಿಷ ನನ್ನ ದೇಹದ ಪ್ರತಿ ನರದಲ್ಲೂ ವ್ಯಾಪಿಸಿ ನನ್ನನ್ನು ತಿದುಹಾಪಿ

ತ್ತಿತ್ತು. ನಾನು ನನ್ನ ಬಲಗೈಯನ್ನು ಅವಳ ಕತ್ತಿನ ಮೇಲಿಟ್ಟು ನನ್ನ ಬಲವನ್ನೆಲ್ಲಾ ಬಿಟ್ಟು ಅಮುಕಿದೆ. ಅವಳು ಒಂದು ಕ್ಷಣ ತನ್ನ ಕಣ್ಣುಗಳನ್ನು ತೆರೆದು ನನ್ನ ಕಡೆಗೆ ಆಶ್ಚರ್ಯದಿಂದ ನೋಡಿದಳು. ಮತ್ತೆ ಕಣ್ಣು ಮುಚ್ಚಿ ಪ್ರಾಣ ಬಿಟ್ಟಳು. ತನ್ನ ಆತ್ಮರಕ್ಷಣೆಗಾಗಿ ಕೂಡ ಅವಳು ಏನೂ ಮಾಡದೆ, ಸ್ವಪ್ನದಲ್ಲಿರುವವಳಂತೆ ಶಾಂತಿಯಿಂದ ಸತ್ತುಹೋದಳು. ನಾನು ಅವಳನ್ನು ಕೊಂದೆನೆಂದು ಅವಳಿಗೆ ನನ್ನ ಮೇಲೆ ಕೋಪ ಇದ್ದಂತೆ ಕಾಣಲಿಲ್ಲ. ಅವಳ ತುಟಿಗಳಿಂದ ಒಂದು ತೊಟ್ಟು ರಕ್ತ ಜಿನುಗಿ ನನ್ನ ಕೈಮೇಲೆ ಬಿತ್ತು. ಆ ಸ್ಥಳ ನಿಮಗೆ ಗೊತ್ತೇ ಇದೆ. ಮಾರನೆಯ ದಿನ ಬೆಳಿಗ್ಗೆ ಅದು ಒಣಗಿದ ಮೇಲೆಯೇ ನಾನು ಅದನ್ನು ಗಮನಿಸಿದ್ದು. ನನ್ನ ಪತ್ನಿಯ ಅಂತ್ಯಕ್ರಿಯೆ ಹೆಚ್ಚು ಗದ್ದಲವಿಲ್ಲದೆ ನಡೆದುಹೋಯಿತು. ನಮ್ಮ ಹಳ್ಳಿವಾಡದ ಎಸ್ಟೇಟಿನಲ್ಲಿ ತನಿಖೆ ಮಾಡುವ ಅಧಿಕಾರಿಗಳಾರೂ ಇಲ್ಲ. ಅಲ್ಲದೆ ಅವಳು ನನ್ನ ಹೆಂಡತಿಯೇ ಆದ್ದರಿಂದ ಯಾರೂ ಏನೂ ಅನುಮಾನ ಪಡುವಂತಿರಲಿಲ್ಲ. ಅವಳಿಗೆ ಬೇರೆ ಯಾವ ನೆಂಟರಾಗಲೀ ಸ್ನೇಹಿತರಾಗಲೀ ಇಲ್ಲದ್ದರಿಂದ ಅನಾನುಕೂಲವಾದ ಪ್ರಶ್ನೆಗಳನ್ನು ಕೇಳುವವರು ಯಾರೂ ಇರಲಿಲ್ಲ. ನಾನು ಬೇಕೆಂತಲೇ ಅವಳ ಅಂತ್ಯಕ್ರಿಯೆ ಆದ ಮೇಲೆಯೇ ಎಲ್ಲರಿಗೂ ವಿಷಯ ತಿಳಿಸಿದೆ. ಜನಗಳ ಸಂತಾಪಸೂಚನೆಗಳನ್ನು ತಪ್ಪಿಸಿಕೊಳ್ಳಲು ನಾನು ಮಾಡಿದ ಉಪಾಯ ಅದು.

“ನಾನು ಮಾಡಿದ ಕಾರ್ಯದಿಂದ ನನ್ನ ಅಂತರಾತ್ಮಕ್ಕೇನೂ ನೋವುಂಟಾಗಲಿಲ್ಲ. ನಾನು ಕ್ರೂರತನದಿಂದ ವರ್ತಿಸಿದ್ದರೂ ಪಾಪಕ್ಕೆ ತಕ್ಕ ಶಾಸ್ತಿ ಮಾಡಿದ್ದೆ. ಆಶ್ಚರ್ಯವೆಂದರೆ, ನನ್ನ ಮನಸ್ಸಿನಲ್ಲಿ ಅವಳ ಬಗ್ಗೆ ದ್ವೇಷವಿರಲಿಲ್ಲ. ನಾನು ಅವಳನ್ನು ಸುಲಭವಾಗಿ ಮರೆತುಬಿಡಬಲ್ಲವನಾಗಿದ್ದೆ. ನಾನು ಅತ್ಯಂತ ಅನಾಸಕ್ತಿಯಿಂದ ಅವಳ ಕೊಲೆ ಮಾಡಿದ್ದೆ. ಅಷ್ಟು ಅನಾಸಕ್ತಿಯಿಂದ ಮತ್ತಾರೂ ಯಾರ ಕೊಲೆಯನ್ನೂ ಮಾಡಿರಲಾರರು.

“ಅಂತ್ಯಕ್ರಿಯೆ ಮುಗಿಸಿ ನಾನು ಮನೆಗೆ ಹಿಂದಿರುಗುತ್ತಿರುವಾಗಲೇ ದೊರೆಸಾನಿ ತನ್ನ ಗಾಡಿಯಲ್ಲಿ ಅಲ್ಲಿಗೆ ಬಂದಳು. ಅಂತ್ಯಕ್ರಿಯೆಯ ವೇಳೆಗೆ ಬರಲು ಅವಳಿಗೆ ಸಾಧ್ಯವಾಗಿರಲಿಲ್ಲ. ನನಗೆ ಬೇಕಾಗಿದ್ದುದೂ ಅದೇ. ಅನಿರೀಕ್ಷಿತವಾದ ಈ ಘಟನೆಯಿಂದ ಅವಳು ದಿಗ್ಭ್ರಾಂತಳಾಗಿದ್ದಳು ಮತ್ತು ಅತ್ಯಂತ ಉದ್ವಿಗ್ನಾವಸ್ಥೆಯಲ್ಲಿದ್ದಳು. ನನ್ನನ್ನು ಸಮಾಧಾನ ಪಡಿಸಲು ಅವಳು ಆಡಿದ ಮಾತುಗಳು ನನಗೆ ಅರ್ಥವಾಗಲಿಲ್ಲ. ನನಗೆ ಯಾರಿಂದಲೂ ಸಾಂತ್ವನ ಬೇಕಿರಲಿಲ್ಲವಾಗಿ ನಾನು ಅವಳ ಮಾತನ್ನು ಆಸ್ಥೆಯಿಂದ ಕೇಳಲಿಲ್ಲ. ಕೊನೆಯಲ್ಲಿ ಅವಳು ಆತ್ಮೀಯತೆಯಿಂದ ನನ್ನ ಕೈ ಹಿಡಿದುಕೊಂಡು ನನ್ನಲ್ಲಿ ಒಂದು ರಹಸ್ಯವನ್ನು ಹೇಳಿಕೊಳ್ಳುವುದಾಗಿಯೂ ನಾನು ಅದರ ದುರುಪಯೋಗ ಪಡೆದುಕೊಳ್ಳುವುದಿಲ್ಲವೆಂದು ಅವಳು ನಂಬುವುದಾಗಿಯೂ ಹೇಳಿದಳು.

“ಅವಳು ತನ್ನ ಕೆಲವು ಪತ್ರಗಳ ಬಗ್ಗೆ ಮಾತನಾಡುತ್ತಾ, ಆ ಪತ್ರಗಳ ವಿಶೇಷತೆಯ ಕಾರಣದಿಂದಾಗಿ ಅವುಗಳನ್ನು ತನ್ನ ಮನೆಯೊಳಗೆ ಇಟ್ಟುಕೊಳ್ಳುವುದು

ಸಾಧ್ಯವಿರಲಿಲ್ಲವೆಂದೂ, ಆದ್ದರಿಂದ ಆ ಪತ್ರಗಳ ಗುಚ್ಛವನ್ನು ನನ್ನ ಪತ್ನಿಯ ಕೈಯಲ್ಲಿ ಕೊಟ್ಟು ಅದನ್ನು ನನ್ನ ಮನೆಯೊಳಗಿಟ್ಟಿರುವಂತೆ ಕೇಳಿಕೊಂಡಿದ್ದಳೆಂದೂ ಹೇಳಿದಳು. ಆ ಕಾಗದಗಳನ್ನು ನಾನು ಅವಳಿಗೆ ಹಿಂತಿರುಗಿಸುವ ಕೃಪೆ ಮಾಡಬೇಕೆಂದು ಕೇಳಿಕೊಂಡಳು. ಅವಳ ಮಾತನ್ನು ಕೇಳುತ್ತಾ ನನ್ನ ಕಾಲ ಕೆಳಗೆ ಭೂಮಿಯೇ ಬಿರಿದಂತಾಯಿತು. ಆದರೂ ಶಾಂತ ಭಾವವನ್ನು ನಟಿಸುತ್ತಾ, ಆ ಪತ್ರಗಳಲ್ಲಿ ಏನಿತ್ತೆಂದು ನಾನು ಅವಳನ್ನು ಕೇಳಿದೆ. ಉತ್ತರವಾಗಿ ಅವಳು, 'ನಿಮ್ಮ ಪತ್ನಿ ನಾನು ಕಂಡ ವ್ಯಕ್ತಿಗಳಲ್ಲೆಲ್ಲಾ ಅತ್ಯಂತ ನಂಬಿಕಸ್ತಳೂ ವಿಶ್ವಸನೀಯಳೂ ಆಗಿದ್ದಳು. ಆ ಪತ್ರಗಳಲ್ಲಿ ಏನಿದೆಯೆಂದು ಅವಳು ಎಂದೂ ಕೇಳಲಿಲ್ಲ. ತಾನು ಆ ಪತ್ರಗಳನ್ನು ಬಿಚ್ಚಿ ನೋಡುವುದೂ ಇಲ್ಲವೆಂದು ಅವಳು ನನಗೆ ಮಾತು ಕೊಟ್ಟಿದ್ದಳು.' ಎಂದಳು.

"'ಅವಳು ನಿಮ್ಮ ಪತ್ರಗಳನ್ನು ಎಲ್ಲಿಟ್ಟಿದ್ದಳು ?"

"'ತನ್ನ ಹೊಲಿಗೆಯ ಯಂತ್ರದ ಕಪಾಟಿನಲ್ಲಿ ಬೀಗ ಹಾಕಿಟ್ಟಿರುವುದಾಗಿ ಹೇಳಿದ್ದಳು. ಎಲ್ಲ ಪತ್ರಗಳನ್ನೂ ಸೇರಿಸಿ ಒಂದು ಗುಲಾಬಿ ಬಣ್ಣದ ಟೇಪು ಕಟ್ಟಿದೆ. ಅದನ್ನು ಗುರುತಿಸುವುದು ಬಹಳ ಸುಲಭ. ಒಟ್ಟು ಮುವ್ವತ್ತು ಪತ್ರಗಳಿವೆ'

"ನಾನು ಅವಳನ್ನು ಹೊಲಿಗೆ ಯಂತ್ರ ಇಟ್ಟಿದ್ದ ಕೊಠಡಿಯೊಳಕ್ಕೆ ಕರೆದುಕೊಂಡು ಹೋಗಿ ಕಪಾಟನ್ನು ತೆರೆದೆ. ಪತ್ರಗಳ ಕಟ್ಟನ್ನು ತೆಗೆದು ಅವಳ ಕೈಗೆ ಕೊಡುತ್ತಾ, 'ಇವೇನೇ ಆ ಪತ್ರಗಳು ?' ಎಂದು ಕೇಳಿದೆ.

"ಅವಳು ಆತುರದಿಂದ ಕೈ ನೀಡಿ ಅದನ್ನು ತೆಗೆದುಕೊಂಡಳು. ನಾನು ಕಣ್ಣೆತ್ತಿ ಅವಳನ್ನು ನೋಡುವ ಸಾಹಸ ಮಾಡಲಿಲ್ಲ. ಅವಳು ಅದರಲ್ಲಿ ಏನಾದರೂ ಓದಬಹುದೆಂದು ನಾನು ಹೆದರಿದೆ. ಪತ್ರಗಳನ್ನು ತೆಗೆದುಕೊಂಡು ಅವಳು ಹೊರಟು ಹೋದಳು.

"ಅಂದಿಗೆ ಒಂದು ವಾರಕ್ಕೆ ಸರಿಯಾಗಿ, ಆ ಭಯಾನಕ ರಾತ್ರಿಯಲ್ಲಿ ಆ ಒಂದು ತೊಟ್ಟು ರಕ್ತ ನನ್ನ ಕೈ ಮೇಲೆ ಬಿದ್ದ ಸ್ಥಳದಲ್ಲಿ, ತೀವ್ರವಾದ ನೋವು ಪ್ರಾರಂಭವಾಯಿತು. ಮುಂದಿನ ವಿಷಯವೆಲ್ಲಾ ನಿಮಗೆ ತಿಳಿದೇ ಇದೆ. ಇದು ಸ್ವಸಮ್ಮೋಹನದ ಪರಿಣಾಮವಲ್ಲದೆ ಬೇರೇನೂ ಅಲ್ಲವೆಂದು ನನಗೆ ತಿಳಿದಿದೆ. ಆದರೆ ನಾನದನ್ನು ನಿವಾರಿಸಲಾರೆ. ನಿಷ್ಕಲ್ಮಶಳೂ ಪಾಪರಹಿತಳೂ ಆದ ನನ್ನ ಪ್ರೇಮದ ಪುತ್ಥಳಿಯನ್ನು ಅಮಾನುಷವಾಗಿ ಕೊಂದ ಕ್ರೌರ್ಯಕ್ಕೆ ಇದೇ ನನಗೆ ಶಿಕ್ಷೆ. ಇದರೊಂದಿಗೆ ಇನ್ನು ಹೋರಾಡಲು ನಾನು ಪ್ರಯತ್ನಿಸುವುದಿಲ್ಲ. ಅವಳಿರುವಲ್ಲಿಗೇ ನಾನೂ ಹೋಗಿ ಸೇರಿಕೊಳ್ಳುತ್ತೇನೆ. ಅವಳಲ್ಲಿ ಕ್ಷಮಾಯಾಚನೆ ಮಾಡುತ್ತೇನೆ. ಅವಳು ಖಂಡಿತ ನನ್ನನ್ನು ಕ್ಷಮಿಸುವಳು. ಈ ಪ್ರಪಂಚದಲ್ಲಿ ಅವಳು ಬದುಕಿದ್ದಾಗ ನನ್ನನ್ನು ಪ್ರೀತಿಸುತ್ತಿದ್ದಂತೆಯೇ ಅಲ್ಲಿಯೂ ಪ್ರೀತಿಸುವಳು.

"ನೀವು ನನಗೆ ಮಾಡಿದ ಉಪಕಾರಕ್ಕೆಲ್ಲಾ ನಿಮಗೆ ಧನ್ಯವಾದಗಳು. ಹೋಗುತ್ತೇನೆ, ನಮಸ್ಕಾರ."

# ಗೋಲ್ಡಿನ್ ಹುಡುಗರು

ಮೂಲ : ಜೋಸೆಫ್ ಎಪ್‌ಸ್ಟೈನ್
ಅನು : ವಾಗಣ್ಣ

ಶವಪೆಟ್ಟಿಗೆ ಮುಚ್ಚಿದ್ದಾಗ್ಯೂ ಗೋಲ್ಡಿನ್ ಕುಟುಂಬದವರ ಹತ್ತಿರ ಹೋಗಿ ಶೋಕ ಸೂಚಿಸಲು ನನಗೆ ಧೈರ್ಯ ಬರಲಿಲ್ಲ. ಫೈಸರ್ ಫ್ಯೂನರಲ್ ಹೋಮ್‌ಗೆ ಕಾರಿನಲ್ಲಿ ಹೋಗುವಾಗ ದಾರಿಯಲ್ಲೇ ಇದರ ಬಗ್ಗೆ ಯೋಚಿಸಿದ್ದೆನಾದರೂ ಬಡಿ ಗೋಲ್ಡಿನ್ ಸತ್ತ ರೀತಿಯನ್ನು ನೆನೆದು ಶೋಕ ಸೂಚಿಸಲು ನನ್ನಲ್ಲಿ ಮಾತೇ ಇರಲಿಲ್ಲವೆಂದು ನನಗನ್ನಿಸಿತ್ತು. ವಿಸಿಟರ್ಸ್ ಪುಸ್ತಕದಲ್ಲಿ ನಾನು ರುಜುವನ್ನಷ್ಟೇ ಮಾಡಿದ್ದಕ್ಕೆ ಕಾರಣ ಒಂದು ವಾರದ ನಂತರವಾದರೂ ಅವರು ಪುಸ್ತಕದ ಪುಟಗಳನ್ನು ತಿರುಗಿಸುವಾಗ ಶೋಕ ಸೂಚಿಸಲು ಬಂದವರ ಪೈಕಿ ಡಾ. ಫಿಲಿಪ್ ಹರ್ಷ್ ಕೂಡ ಇದ್ದನೆಂದು ಅವರಿಗೆ ತಿಳಿಯಲಿ ಎಂಬುದು ನನ್ನ ಸಣ್ಣದ ಉದ್ದೇಶವಾಗಿತ್ತು.

ಬಡಿಯ ತಂದೆತಾಯಿಗಳು ಮತ್ತು ಅವನ ಮೂವತ್ತು ವರ್ಷ ದಾಟಿದ ಹೆಂಡತಿ ಮತ್ತು ಇಬ್ಬರು ಹೆಣ್ಣು ಮಕ್ಕಳು ಕುಳಿತಿದ್ದ ಸಾಲಿನಿಂದ ಸುಮಾರು ಇಪ್ಪತ್ತು ಸಾಲುಗಳ ಹಿಂದೆ ಕುಳಿತುಕೊಂಡೆ. ನನ್ನ ಕಡೆ ಬೆನ್ನು ಮಾಡಿ ಕುಳಿತಿದ್ದವರನ್ನು ಗಮನಿಸುತ್ತಿದ್ದ ನನಗನ್ನಿಸಿತು: ದುಃಖದ ಭಾರದಲ್ಲಿ ಮಂದಿ ಕುಳಿತುಕೊಳ್ಳುವ ಭಂಗಿ ಬಹಳ ಚಿಂತಾಜನಕವಾಗಿರುತ್ತದೆ ಎಂದು. ಸಿಡ್‌ಗೋಲ್ಡಿನ್ ಧರಿಸಿದ್ದ ಬೆಲೆ ಬಾಳುವ ಸೂಟು ಕೂಡ ಭುಜಗಳ ಮೇಲೆ ಎಗರಿನಿಂತ ಹಾಗೆ ಕಂಡಿತಲ್ಲದೆ, ಹೊಲಿಗೆ ಶ್ರೇಷ್ಠ ಮಟ್ಟದ್ದೆಂದು ಹೇಳುವಂತಿರಲಿಲ್ಲ. ಇಳಿವಯಸ್ಸಿನಲ್ಲಿ ಕೊಂಚ ಕುಗ್ಗಿದ ಹಾಗೆ ತೋರಿದ ಜೀನ್ ಗೋಲ್ಡಿನ್ ವರ್ಷವಿಡೀ ಸೂರ್ಯನತಾಪಕ್ಕೆ ಮೈಯೊಡ್ಡುವ ಹವ್ಯಾಸದ ಪರಿಣಾಮವಾಗಿ ಅವಳ ಮುಖ ದುಃಖಕ್ಕೆ ಸ್ಪಂದಿಸದ ರೀತಿ ಒರಟಾಗಿ ಕಾಣುತ್ತಿತ್ತು. ವಿಶಿಷ್ಟ ದಂಪತಿಗಳಿಗೆ ಸುಖವನ್ನಷ್ಟೇ ಕೊಡಲು ಬದುಕು ತುಡಿಯುತ್ತಿತ್ತೆಂದು ಬಗೆಯುವ ಕಾಲಕ್ಕೆ ವಿಧಿ ಅತ್ಯಂತ ಕಹಿಯಾದ ದಾಳವನ್ನು ಎಳೆದು ಬಿಟ್ಟಿತ್ತು: ಇಳಿವಯಸ್ಸಿಗೆ ಕಾಲಿಡುವವರಿಗೆ ಒಬ್ಬ ಪುತ್ರನ ವಿಯೋಗವಾಗಿತ್ತು.

ಗಿಡ್ಡ ಆಕಾರದ ಯಹೂದ್ಯ ಪಾದ್ರಿ ಪ್ರತಿಜ್ಞಾ ಘೋಷಣೆಯ ತನ್ನ ಶಕ್ತಿಗೆ

ತಾನೇ ತೃಪ್ತನಾಗಿ ಅಷ್ಟೇನೂ ಭರವಸೆ ಇಲ್ಲದ ದನಿಯಲ್ಲಿ ಸಾವಿನ ಕಾರುಣ್ಯವನ್ನು ಕುರಿತು ಬೋಧಿಸುತ್ತಿದ್ದ. ಈ ಪಾದ್ರಿ ಬಡಿಯನ್ನು ಎಂದೂ ಭೇಟಿ ಮಾಡಿರಲಿಲ್ಲವಾದರೂ ಅವನನ್ನು ಬರ್ನಾರ್ಡ್ ಅಂತ ಕರೆಯುತ್ತಾ ಎರಡನೇ ಶಬ್ದವನ್ನು ಒತ್ತಿ ಉಚ್ಚರಿಸುತ್ತಿದ್ದ ಕಾರಣ ಬಡಿಯನ್ನು ಚೆನ್ನಾಗಿ ತಿಳಿದಿದ್ದ ನಮಗೂ ಅವನ ಹೆಸರು ವಿಚಿತ್ರವಾಗಿ ಕೇಳಿಸಿ ಅವನಾರೋ ಬೇರೆಯವನಿರಬೇಕು ಅನ್ನಿಸತೊಡಗಿತು. ತತ್ವ ಬೋಧನೆಯ ಉದ್ದಕ್ಕೂ ಒಮ್ಮೆಯಾದರೂ ಪಾದ್ರಿ ಬಡಿ ಗೋಲ್ಡಿನ್ ಒಬ್ಬ ಆತ್ಮಹತ್ಯೆ ಮಾಡಿಕೊಂಡವ ಎಂದು ತಿಳಿಸಲಿಲ್ಲ.

ಪಾದ್ರಿಯ ಬೋಧನೆಯ ಕಾಲದಲ್ಲಿ ಎದ್ದು ಕಂಡ ಇನ್ನೊಂದು ಗಮನಾರ್ಹ ಅಂಶವೆಂದರೆ ಬಡಿಯ ಅವಳಿ ಸೋದರ ಎಡಿಯು ಆ ಸ್ಥಳದಲ್ಲಿ ಹಾಜರಿಲ್ಲದೇ ಇದ್ದುದು. ಬಡಿ ಮತ್ತು ಎಡಿ ಗೋಲ್ಡಿನ್‌ರು ಅವಳಿ ಜವಳಿಯಾಗಿದ್ದರಿಂದ ಅವರ ರೂಪಿನಲ್ಲಿ ತೀರಾ ಸಾಮ್ಯವಿತ್ತಾದರೂ ಸ್ವಭಾವದಲ್ಲಿ ಬಹಳ ವ್ಯತ್ಯಾಸವಿತ್ತು. ಇಬ್ಬರೂ ಸ್ವಲ್ಪ ಒರಟೊರಟಾಗಿ ಕಂಡರೂ ಬಡಿಯ ತಲೆಕೂದಲು ನೇರವಾಗಿದ್ದರೆ, ಎಡಿಯ ಕೂದಲು ಗುಂಗುರುಗುಂಗುರಾಗಿತ್ತು. ಆರು ಅಡಿ ಎರಡು ಅಂಗುಲ ಎತ್ತರವಿದ್ದ ಬಡಿ ಸ್ವಲ್ಪ ತೋರವಾಗಿ ಮಾಂಸಖಂಡಗಳಿಂದ ತುಂಬಿಕೊಂಡಿದ್ದ; ಎಡಿಗಿಂತ ಕೆಲವು ಅಂಗುಲ ಎತ್ತರವಿದ್ದ. ಅವರಿನ್ನೂ ಚಿಕ್ಕವರಾಗಿದ್ದಾಗ. ಬಡಿಯ ಚರ್ಮ ಅಂದವಾಗಿರಲಿಲ್ಲ ಮತ್ತು ಎಡಿಯ ಮುಂಭಾಗದ ಹಲ್ಲೊಂದು ಮುಕ್ಕಾಗಿತ್ತು (ಆ ನಂತರ ಅವನು ಅದಕ್ಕೆ ಕ್ಯಾಪ್ ಹಾಕಿಸಿಕೊಂಡ). ಬಡಿ ಯಾವಾಗಲೂ ತಾಳ್ಮೆಯಿಂದಿದ್ದು ಸ್ವಲ್ಪ ನಿರ್ಲಿಪ್ತನಂತೆ ಕಂಡರೆ, ಎಡಿ ಶೀಘ್ರ ಕೋಪಿ ಮತ್ತು ಜಗಳಗಂಟನಾಗಿದ್ದ. ಆದರೂ ಜನರಿಗೆ ಗೊತ್ತಿದ್ದ ಪ್ರಕಾರ ಅವರಿಬ್ಬರೂ ಬಹಳ ಸಾಮರಸ್ಯದಿಂದ ನಡೆದುಕೊಳ್ಳುತ್ತಿದ್ದರು. ಅವರನ್ನು ನಾನು ಅನೇಕ ಸಲ ಭೇಟಿಯಾಗುತ್ತಿದ್ದೆನಾದರೂ ಒಂದು ಬಾರಿಯೂ ಅವರು ಪರಸ್ಪರ ಜಗಳವಾಡಿದುದನ್ನಾಗಲೀ ಅಥವಾ ಒಬ್ಬನ ವಿರುದ್ಧ ಇನ್ನೊಬ್ಬ ಚಾಡಿ ಹೇಳಿದುದನ್ನಾಗಲೀ ಕಾಣೆ. ಅವರು ಹೈಸ್ಕೂಲ್ ಜೂನಿಯರ್ ತರಗತಿಯಲ್ಲಿರುವಾಗಲೇ ಅವರ ತಂದೆ ಅವರಿಗೆ ಓಲ್ಡ್ಸ್ ಮೊಬೈಲ್—ಸ್ಟಾರ್‌ಫೈರ್ ಅಂತ ಅದರ ಹೆಸರು—ಕಾರೊಂದನ್ನು ಕೊಡಿಸಿದ್ದರು. ಅದನ್ನು ಅವರಿಬ್ಬರೂ ಯಾವುದೇ ತಂಟೆ ತಕರಾರಿಲ್ಲದೆ ಒಟ್ಟಾಗಿ ಉಪಯೋಗಿಸುತ್ತಿದ್ದರು.

ಎಡಿ ಗೋಲ್ಡಿನ್ ಮತ್ತು ಅವನ ತಂದೆತಾಯಿಯರ ಮಧ್ಯೆ ಗಂಭೀರವಾದ ಸಮಸ್ಯೆ ತಲೆದೋರಿ ಅವನು ಅವರಿಂದ ಸಂಪೂರ್ಣವಾಗಿ ದೂರ ಉಳಿದಿದ್ದ ಎಂಬ ಸಂಗತಿ ನನಗೆ ಗೊತ್ತಿತ್ತು. ಥೈಲ್ಯಾಂಡ್, ಟೀವಾನ್ ಅಥವಾ ಜಿಂಬಾಬ್ವೆಯಲ್ಲಿ ಅವನು ಅಧ್ಯಾಪಕನಾಗಿದ್ದಾನೆ ಅಂತ ಜನ ಬಗೆಬಗೆಯಾಗಿ ಊಹಿಸಿಕೊಂಡಿದ್ದರಾದರೂ ಅವನು ವಾಸ್ತವವಾಗಿ ಎಲ್ಲಿರುವನೆಂದು ಯಾರಿಗೂ ಸ್ಪಷ್ಟವಾಗಿ ಗೊತ್ತಿರಲಿಲ್ಲ. ಜೊತೆಗೆ, ಮಂಗಳವಾರದ ಮಧ್ಯಾಹ್ನ ಹಾಡುಹಗಲಿನಲ್ಲಿ ಒನ್‌ನಾರ್ಥ್ ಲಾಸಲ್‌ನ ಇಪ್ಪತ್ತ ಮೂರನೇ ಅಂತಸ್ತಿನಲ್ಲಿದ್ದ ತನ್ನ ಕಾಯಿದೆ ಆಫೀಸಿನಿಂದ ಹಾರಿ ಬಡಿ ಎರಡು ದಿನಗಳ

ಒಂದೆ ಪ್ರಾಣ ಬಿಟ್ಟ ಸುದ್ದಿಯೂ ಕೂಡ ಅವನಿಗೆ ತಿಳಿದಿದೆಯೋ ಇಲ್ಲವೋ ಇದುವರೆಗೆ. ತನ್ನ ಮತ್ತು ತನ್ನ ತಂದೆತಾಯಿಗಳ ಮಧ್ಯೆ ಏನೇ ವೈಷಮ್ಯ ಇದ್ದರೂ ಈ ಸಮಾಚಾರ ತಲುಪಿದ್ದ ಪಕ್ಷದಲ್ಲಿ ಎಡಿ ಬಂದೇ ಬರುತ್ತಿದ್ದ.

ವೆಸ್ಟ್ ರೋಜರ್ಸ್ ಪಾರ್ಕ್‌ನಲ್ಲಿದ್ದ ಡೇನಿಯಲ್ ಬೂನ್ ಸ್ಕೂಲ್‌ನ ವ್ಯಾಕರಣ ಶಾಲೆಗೇ ನಾನು ಗೋಲ್ಡ್ಮನ್ ಹುಡುಗರ ಜೊತೆ ಸೇರಿದ್ದು. ತರುವಾಯದಲ್ಲಿ, ಬೂನ್ ಸ್ಕೂಲಿನಿಂದ ಇವಾನ್‌ಸ್ಟನ್ ಟೌನ್‌ಶಿಪ್ ಹೈಸ್ಕೂಲಿಗೆ (ಇ.ಟಿ.ಎಚ್.ಎಸ್.) ಬಂದ ಮಕ್ಕಳೆಂದರೆ ನಾವು ಮೂವರೇ. ಬಡಿ ಮತ್ತು ಎಡಿ ಗೋಲ್ಡ್ಮನ್ ಇವಾನ್‌ಸ್ಟನ್‌ಗೆ ಹೋಗಲು ಕಾರಣ ಅವರು ಆ ವೇಳೆಗಾಗಲೇ ಒಳ್ಳೆಯ ಓಟಗಾರರೆಂದು ಹೆಸರುವಾಸಿಯಾಗಿದ್ದರು; ಮೇಲಾಗಿ ಶಿಕಾಗೋ ಪಬ್ಲಿಕ್ ಸ್ಕೂಲುಗಳಲ್ಲಿ ದುರ್ಲಭವಾದ ತರಬೇತಿಯನ್ನು ಇ.ಟಿ.ಎಚ್.ಎಸ್. ಕೊಡುತ್ತಿತ್ತು. ನಮ್ಮ ತಂದೆ ಔಷಧಿ ವ್ಯಾಪಾರಿಯಾಗಿದ್ದದ್ದರಿಂದ ನಾನು ವೈದ್ಯನಾಗಲಿ ಎಂಬ ಆಸೆ ಇತ್ತು ಅವನಿಗೆ—ಈಗ ನಾನು ತರಬೇತಿ ಹಂತದಲ್ಲಿರುವ ವೈದ್ಯನಾಗಿರುವುದಕ್ಕೆ ನನ್ನ ತಂದೆಯ ಕನಸು ಕಾರಣ—ಅಂತೆಯೇ ನಾನೂ ಕೂಡ ಇ.ಟಿ.ಎಚ್.ಎಸ್. ಸೇರಿದೆ. ಆ ಕಾಲದಲ್ಲಿ ತಲೆದೋರಿದ ಪರಿಣಾಮವಾಗಿ ಒಂದು ಮಗುವನ್ನು ಶಿಕಾಗೋದಿಂದ ಇ.ಟಿ.ಎಚ್.ಎಸ್.ಗೆ ಸೇರಿಸಲು ವರ್ಷಕ್ಕೆ ಆರು ನೂರು ಡಾಲರ್ ಖರ್ಚಾಗುತ್ತಿತ್ತು.

ಡೀವನ್ ಅವೆನ್ಯೂನಲ್ಲಿ ಬಹಳ ಎಚ್ಚರಿಕೆಯಿಂದ ಔಷಧಿ ಅಂಗಡಿ ನಡೆಸುತ್ತಿದ್ದ ನಮ್ಮ ತಂದೆಗೆ ಈ ಖರ್ಚು ತಲೆನೋವು ತಂದಿತ್ತು ಎಂಬುದು ನನಗೆ ನೆನಪಿದೆ. ಶಿಕಾಗೋದ ಚಳಿಗಾಲದ ಮುಂಜಾನೆಯ ಯಮ ಚಳಿಯಲ್ಲಿ ಅವರು ವೃತ್ತಪತ್ರಿಕೆಯ ಬಂಡಲ್‌ಗಳನ್ನು ಅಂಗಡಿಗೆ ಹಾಕುತ್ತಿದ್ದ ದೃಶ್ಯ ಇನ್ನೂ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿದೆ. ಎರಡು ಮಕ್ಕಳ ವಿದ್ಯಾಭ್ಯಾಸಕ್ಕೆ ತಗಲುವ ಸಾವಿರದ ಆರುನೂರು ಡಾಲರ್‌ಗಳು ಗೋಲ್ಡ್ಮನ್ ದಂಪತಿಗಳಿಗೆ ಏನೇನೂ ಆಗಿರಲಿಲ್ಲ. ಹಣದ ತಾಪತ್ರಯವನ್ನು ಅವರು ಎಂದೂ ಕಾಣರು.

ವಾಷ್‌ಟೆನಾ ಅವೆನ್ಯೂನ ಆರು ಫ್ಲಾಟಿನ ಕಟ್ಟಡವೊಂದರಲ್ಲಿ ನಮ್ಮ ವಾಸ. ನಮ್ಮ ವಾಸದ ಮನೆಗೂ ನಮ್ಮ ತಂದೆಯ ಔಷಧಿ ಅಂಗಡಿಗೂ ಒಂದೇ ಒಂದು ಬ್ಲಾಕಿನ ದೂರ; ಹಾಗಾಗಿ, ಅವರು ವಾರಕ್ಕೆ ಏಳು ದಿನ ಮುಂಜಾನೆ ಏಳರಿಂದ ರಾತ್ರಿ ಒಂಭತ್ತುವರೆವರೆಗೆ—ಭಾನುವಾರ ಮಾತ್ರ ಸಂಜೆ ಐದು ಗಂಟೆಗೆ ಮುಚ್ಚುತ್ತಿದ್ದರು—ಅಂಗಡಿ ತೆರೆಯುತ್ತಿದ್ದರು. ಮಧ್ಯಾಹ್ನ ಲಂಚ್‌ಗೆ ಅರ್ಧಗಂಟೆ ಬಿಡುವು ಮಾಡಿಕೊಂಡರೆ ರಾತ್ರಿ ಊಟಕ್ಕೆ ಒಂದು ಗಂಟೆ ಪುರಸೊತ್ತು ಮಾಡಿಕೊಳ್ಳುತ್ತಿದ್ದರು. ಶುಕ್ರವಾರ ರಾತ್ರಿ ಮತ್ತು ಯಹೂದ್ಯ ರಜಾ ದಿನಗಳನ್ನು ಬಿಟ್ಟು ಉಳಿದ ದಿನಗಳಲ್ಲಿ ನಾವು ಅಡುಗೆ ಮನೆಯಲ್ಲೇ ಊಟ ಮಾಡುತ್ತಿದ್ದೆವು. ನನಗೆ ನನ್ನದೇ ಪ್ರತ್ಯೇಕವಾದ ಮಲಗುವ ಕೋಣೆ; ಹಾಗೆಯೇ ನನ್ನ ತಂಗಿ ಶೀಲಾಳಿಗೂ ಸಹ—ನಮ್ಮ ತಂದೆತಾಯಿಯರದು ಇನ್ನೊಂದು ಕೋಣೆ. ನಮ್ಮೆಲ್ಲರಿಗೂ ಮಾತ್ರ ಒಂದೇ ಸ್ನಾನದ ಮನೆ. ನಮ್ಮ ವೆರಾಂಡಾದಲ್ಲಿ

ಉಳಿದ ಪೀಠೋಪಕರಣಗಳ ಜೊತೆಗೆ ಪ್ಲಾಸ್ಟಿಕ್ ಹೊದಿಸಿದ ಒಂದು ಕುರ್ಚಿ ಇತ್ತು. ಯಾರಾದರೂ ಮನೆಗೆ ಬಂದರೆ ಮಾತ್ರ ನಾವು ಅವರೊಡನೆ ವರಾಂಡಾಕ್ಕೆ ಹೋಗಿ ಕುಳಿತುಕೊಳ್ಳುತ್ತಿದ್ದೆವು; ನಮ್ಮ ತಂದೆಯ ಉದ್ಯೋಗದ ನಮೂನೆಯನ್ನು ಗಮನಿಸಿದರೆ ಹೋಗಿಬರುವವರೇನೂ ಅಪಾರವಾಗಿರಲಿಲ್ಲ.

ಗೋಲ್ಡಿನ್ ಕುಟುಂಬದವರು ಫ್ರಾನ್ಸಿಸ್ಕೋ ಮತ್ತು ಸ್ಯಾಕ್ರಮೆಂಟೊದ ನಡುವೆ ಒಂದಾರೇಳು ಬ್ಲಾಕ್‌ಗಳ ಆಚೆ ಇದ್ದರೂ ಕೂಡ ನನ್ನ ಪಾಲಿಗೆ ಅದು ಬೇರೊಂದು ಪ್ರಪಂಚವೇ ಆಗಿತ್ತು. ಮಹಾಯುದ್ಧದ ನಂತರ ನಿರ್ಮಾಣವಾಗಿದ್ದ ಹನ್ನೊಂದು ಕೊಠಡಿಗಳ ವಿಶಾಲವಾದ ಅವರ ಮನೆಯ ಕಟ್ಟಡಕ್ಕೆ ಕೆಂಪು ಇಟ್ಟಿಗೆಗಳನ್ನು ಯಥೇಚ್ಛ ವಾಗಿ ಬಳಸಿದ್ದರು. ಮುಂಭಾಗದಲ್ಲಿ ದೊಡ್ಡ ದೊಡ್ಡ ಕಿಟಕಿಗಳೆರಡು ಮತ್ತು ಹಸಿರು ಮುಕ್ಕಳಿಸುವ ಲಾನು; ಎರಡೂ ಬದಿಯಲ್ಲಿ ಗರಾಜ್‌ನ ವ್ಯವಸ್ಥೆ. ಮೆಕ್ಸಿಕೋದ ಕೆಲಸಗಾರರ ಒಂದು ಪುಟ್ಟ ತಂಡವೇ ಲಾನು ಮತ್ತು ಕೈತೋಟವನ್ನು ನೋಡಿಕೊಳ್ಳಲು ನಿರತವಾಗಿತ್ತು. ಅಡುಗೆಮನೆಗೆ ಸೇರಿದ ಹಾಗೇ ಇದ್ದ ಕೊಠಡಿಯಲ್ಲಿ ವಾಸವಾಗಿದ್ದ ಜೆಸ್ಸಿ ಎಂಬ ಕರಿ ಹೆಂಗಸು ರುಚಿರುಚಿಯಾಗಿ ಅಡುಗೆ ತಯಾರು ಮಾಡುವಳು. ಜೋಡಿ ಗರಾಜಿನಲ್ಲಿ ಒಂದು ಕಡೆ ಸಿಡ್‌ಗೋಲ್ಡಿನ್‌ನ ನೀಲಿ ಬಣ್ಣದ ಫ್ಲೀಟ್‌ವುಡ್ ಕಾರು ಇನ್ನೊಂದು ಗರಾಜಿನಲ್ಲಿ ಅವನ ಹೆಂಡತಿಯ ಕ್ರೀಮ್‌ಬಣ್ಣದ ಕಾರು. ಗರಾಜಿನ ಒಳ ಗೋಡೆಗಳ ಪಕ್ಕದಲ್ಲಿ ಗಾಲ್ಫ್ ಕೋಲುಗಳು, ಟೆನ್ನಿಸ್ ಮತ್ತು ಬ್ಯಾಡ್‌ಮಿಂಟನ್ ರ‍್ಯಾಕೆಟ್ಟುಗಳನ್ನು ಇಡಲು ಹಸಿರು ಬಣ್ಣದ ಕವರುಗಳಿದ್ದವು. ಇವುಗಳ ಜೊತೆಗೆ ಬಿಲ್ ವಿದ್ಯೆಗೆ ಬಳಸುವ ನಿಶಾನ, ಮತ್ತು ಇನ್ನೂ ಅನೇಕ ಆಟೋಟಗಳ ಉಪಕರಣಗಳಿದ್ದವು —ಎಲ್ಲಾ ಶ್ರೇಷ್ಠ ಮಟ್ಟದ ಪದಾರ್ಥಗಳು.

ಗೋಲ್ಡಿನ್ ಮನೆಯ ಒಳಗೆ ಶ್ರೀಮಂತಿಕೆಯ ಲಾಸ್ಯ ಎಲ್ಲ ಕಡೆ ಎದ್ದು ಕಾಣುತ್ತಿತ್ತು. ಈ ಪದಾರ್ಥಗಳೇನಾದರೂ ನಮ್ಮ ಮನೆಯಲ್ಲಿದ್ದರೆ ನಮ್ಮ ಅಮ್ಮ ಖಂಡಿತವಾಗಿ ಎಲ್ಲದರ ಮೇಲೆ ಪ್ಲಾಸ್ಟಿಕ್ ಹೊದಿಕೆ ಹೊದಿಸಿಬಿಡುತ್ತಿದ್ದಳಷ್ಟೇ ಅಲ್ಲ ಆ ಸುಂದರವಾದ ಸುಪ್ಪತ್ತಿಗೆಯಂಥ ರತ್ನಗಂಬಳಿಯ ಮೇಲೆ ಬೂಟುಗಾಲಿನಲ್ಲಿ ನಮ್ಮನ್ನು ನಡೆದಾಡಿಸಗೊಡುತ್ತಿರಲಿಲ್ಲ. ಕಣ್ಣುಗಳಿಗೆ ತಣ್ಣಗಿನ ಅನುಭವ ಕೊಡುವ ಬಿಳಿ ಬಣ್ಣ ಬಳಿದಿದ್ದ ನೆಲಮಾಳಿಗೆಯ ಒಂದು ವಿಶಾಲವಾದ ಕೊಠಡಿಯಲ್ಲಿ ಪಂದ್ಯಾಟಗಳಲ್ಲಿ ಗೆದ್ದಿದ್ದ ಟ್ರೋಫಿಗಳನ್ನು ಅಂದವಾಗಿ ಜೋಡಿಸಿದ್ದರು, ಹಸಿರು ಬಣ್ಣದ ಚರ್ಮದ ಹೊದಿಕೆ ಹೊದಿಸಿದ್ದ ಕುರ್ಚಿಗಳು ಸಾಲಾಗಿ ಇಡಲ್ಪಟ್ಟಿದ್ದವು. ಕೊಠಡಿಯ ಒಂದು ತುದಿಯಲ್ಲಿ ಬಾರು ಮತ್ತೊಂದು ತುದಿಯಲ್ಲಿ ಒಂದು ದೊಡ್ಡ ಟೆಲಿವಿಷನ್ ಸೆಟ್ಟು. ಕೊಠಡಿ ಯಲ್ಲೆಲ್ಲ ಅಷ್ಟಷ್ಟು ದೂರಕ್ಕೆ ಗೋಡೆಯ ತುಂಬಾ ಗಾಜಿನ ಕೇಸುಗಳಿದ್ದವು. ಓಟದ ಸ್ಪರ್ಧೆಯಲ್ಲಿ ಗೆದ್ದ ಬಹುಮಾನಗಳನ್ನು ಜೋಡಿಸಿದ್ದ ಗಾಜಿನ ಕೇಸುಗಳು ಕೆಲವು. 1930ರ ದಶಕದಲ್ಲಿ ಇಲಿನಾಯ್ ವಿಶ್ವವಿದ್ಯಾನಿಲಯದಲ್ಲಿ ಓದುತ್ತಿದ್ದಾಗ ಫುಟ್‌ಬಾಲ್ ಮತ್ತು ಬ್ಯಾಸ್ಕೆಟ್‌ಬಾಲ್ ಪಂದ್ಯಗಳಲ್ಲಿ ಸಿಡ್‌ಗೋಲ್ಡಿನ್ ಗೆದ್ದಿದ್ದ ಬಹುಮಾನಗಳೂ

ಅವುಗಳಲ್ಲಿ ಸೇರಿದ್ದವು. ಒಂದು ಕೇಸಿನ ಮೇಲೆ ಎರಡು ಛಾಯಾಚಿತ್ರಗಳು ತೂಗು ಹಾಕಿದ್ದರು. ಸಿಡ್‌ಗೋಲ್ಡಿನ್ ಒಂದು ಕೈಯ್ಯಲ್ಲಿ ಫುಟ್‌ಬಾಲ್ ಹಿಡಕೊಂಡು ತೆಗಸಿ ಕೊಂಡಿದ್ದ ಫೋಟೋ ಮತ್ತು ಅದರ ಪಕ್ಕದಲ್ಲಿ 1934ರ ಇಲಿನಾಯ್ಸ್ ವಿಶ್ವವಿದ್ಯಾ ನಿಲಯದ ಬ್ಯಾಸ್ಕೆಟ್‌ಬಾಲ್ ತಂಡದಲ್ಲಿ ಇದ್ದ ಒಂದೇ ಒಂದು ಯಹೂದ್ಯ ಮುಖ— ಅದೇ ಸಿಡ್‌ಗೋಲ್ಡಿನ್‌ನದು. ಅಲ್ಲಿ ಪೇರಿಸಿದ್ದ ಟ್ರೋಫಿಗಳಲ್ಲಿ ಮುಕ್ಕಾಲುಪಾಲು ಜೀನ್‌ಗೋಲ್ಡಿನ್ ಗೆದ್ದಿದ್ದವು—ಆಕೆ ತನ್ನ ಇಪ್ಪತ್ತರ ಹರೆಯದಲ್ಲಿ ಶ್ರೇಷ್ಠ ಗಾಲ್ಫ್ ಆಟಗಾರ್ತಿಯಾಗಿದ್ದಳಲ್ಲದೆ ರಾಷ್ಟ್ರಮಟ್ಟದ ಅರ್ಹತೆ ಗಳಿಸಿದ್ದಳೆಂದು ಕೇಳಿಬಲ್ಲೆ. ಇನ್ನೊಂದು ಗಾಜಿನ ಕೇಸಿನಲ್ಲಿ ಓಟದ ಸ್ಪರ್ಧೆಯಲ್ಲಿ ಬಡಿ ಮತ್ತು ಎಡಿ ಗೆದ್ದು ತಂದಿದ್ದ ಬಹುಮಾನಗಳಿದ್ದವು. ಅವರಿಬ್ಬರಿಗೆ ಆಗ ಕೇವಲ ಹದಿನಾಲ್ಕು ವರ್ಷ ವಯಸ್ಸು. ಇನ್ನು ಮುಂದೆಯೂ ಅವರು ಗೆಲ್ಲುವ ಬಹುಮಾನಗಳನ್ನು ಇಡಲು ಇನ್ನೆಷ್ಟು ಬ್ಯೂರೋಗಳ ಅಗತ್ಯವಿದೆಯೋ ?

ಗೋಲ್ಡಿನ್ ಹುಡುಗರು ಮಾಮೂಲಿ ಓಟಗಾರರಾಗಿರದೆ ಬಹಳ ಉತ್ತಮ ಮಟ್ಟದ ಅಥ್‌ಲೀಟ್‌ಗಳಾಗಿದ್ದರು. ಶೀಘ್ರಗತಿಯಲ್ಲಿ ಬೆಳೆದು ನಿಂತಿದ್ದ ಅವರು ತುಂಬಾ ಎಳೆಯ ವಯಸ್ಸಿನಲ್ಲಿಯೇ ಓಟದಲ್ಲಿ ಅನುಪಮ ಸಾಮರ್ಥ್ಯ ಮೆರೆದಿದ್ದರು. ಕೇವಲ ಹದಿಮೂರು ವಯಸ್ಸಿಗೇ ಜೂನ್ ಸ್ಕೂಲ್ ಯಾರ್ಡ್‌ನ ಸಾಫ್ಟ್‌ಬಾಲ್ ಆಟ ಗಳಲ್ಲಿ ಮಹತ್ವದ ಸ್ಥಾನಗಳಲ್ಲಿ ಆಡುತ್ತಿದ್ದರು : ಇತರರು ಬರದೇಹೋದ ಕಾರಣಕ್ಕಾಗಿ ಕಡೆಯ ಸ್ಥಾನಗಳಲ್ಲಿ ಆಡುತ್ತಿದ್ದವರಲ್ಲ. ಶಾರ್ಟ್‌ಸ್ಟಾಪ್‌ನಲ್ಲಿ ನಿಲ್ಲುತ್ತಿದ್ದ ಎಡಿಯ ಕೈಯಿಂದ ಯಾವ ಬಾಲೂ ನುಣುಚುವ ಹಾಗಿರಲಿಲ್ಲ : ಸೆಂಟರ್ ಫೀಲ್ಡ್‌ನಲ್ಲಿ ನಿಲ್ಲುತ್ತಿದ್ದ ಬಡಿ ಪಕ್ಕದಲ್ಲಿ ಹಾರಿಹೋಗುವ ಚೆಂಡುಗಳನ್ನು ಡೈವ್‌ಮಾಡಿ ಹಿಡಿದುಬಿಡುತ್ತಿದ್ದ ನಲ್ಲದೆ ಚೆಂಡು ಎಷ್ಟೇ ಕಷ್ಟವಾಗಿದ್ದರೂ ಅತಿ ಸುಲಭವಾಗಿ ಕಾಣುವಂತೆ ಚಮತ್ಕಾರ ಮಾಡುತ್ತಿದ್ದ. ಈ ಓಟದ ಪ್ರತಿಭೆ ಅವರ ತಂದೆತಾಯಿಗಳಿಂದೇನಾದರೂ ಎರವಲಾಗಿ ಬಂದಿತ್ತೇ ? ಒಂದು ವೇಳೆ ವೈಜ್ಞಾನಿಕವಾಗಿ ಅವರ ಪ್ರತಿಭೆಯನ್ನು ವಿವರಿಸಲಿಕ್ಕೆ ಆಗದೆ ಹೋದರೆ ಬೇರೆ ಯಾರಾದರೂ ಇದನ್ನು ಸಮರ್ಪಕವಾಗಿ ವಿವರಿಸಲು ಸಾಧ್ಯ ವಾದರೆ !

ಅವರಿಬ್ಬರ ಓಟದ ವಿಧಾನದಲ್ಲಿ ಮಾತ್ರ ವ್ಯತ್ಯಾಸವಿತ್ತು. ಎಡಿ ಗೋಲ್ಡಿನ್ ಬಹಳ ಶ್ರಮ ಮತ್ತು ಧೈರ್ಯದಿಂದ ಗುರಿ ಸಾಧಿಸುವವನು. ಶಾರೀರಿಕವಾಗಿ ಅವನಷ್ಟು ಧೈರ್ಯ ಪ್ರದರ್ಶಿಸುವವರು ಬೇರೊಬ್ಬರು ನನ್ನ ಕಣ್ಣಿಗೆ ಬಿದ್ದಿಲ್ಲ. ನೆಲಕ್ಕೆ ಬಿದ್ದು ಜಾರುವ ಪ್ರಮೇಯ ಬಂದಾಗ ಮೊದಲು ತಲೆಯನ್ನು ಮುಂಚಾಚಲು ಸಿದ್ಧ, ಹಾಗೆಯೇ ಬ್ಯಾಸ್ಕೆಟ್‌ಬಾಲ್ ಕೋರ್ಟಿನಲ್ಲಿ ಎಂಥ ಪೆಟ್ಟಿಗೂ ಹೆದರುವವನಲ್ಲ ; ತನ್ನ ಎರಡರಷ್ಟು ಗಾತ್ರದ ಪ್ರತಿಸ್ಪರ್ಧಿಯನ್ನು ಅಡ್ಡಗಟ್ಟಿ ನಿಲ್ಲಿಸುವಷ್ಟು ಎದೆಗಾರಿಕೆ ಉಳ್ಳವನು. ಎದುರಾಳಿಯನ್ನು ಒತ್ತರಿಸುವ, ಧೈರ್ಯ ಪ್ರದರ್ಶಿಸುವ ಅವಶ್ಯಕತೆ ಬಿದ್ದಾಗ ಬಡಿ ಗೋಲ್ಡಿನ್ ಮಾತ್ರ ಯಾವಾಗಲೂ ಹಿಂದೇಟು. ಕೋರ್ಟ್‌ನಲ್ಲಾಗಲೀ,

ಫೀಲ್ಡ್‌ನಲ್ಲಾಗಲೀ ಎಲ್ಲವೂ ಸಹಜವಾಗಿ ಅವನಿಗೆ ಒಪ್ಪುತ್ತಿತ್ತು. ಬಹಳ ವೇಗವಾಗಿ ಓಡುವಾಗಲೂ ಅವನು ಅನಾಯಾಸವಾಗಿ ಜಿಗಿಯುತ್ತಿರುವಂತೆ ತೋರುತ್ತಿತ್ತು. ಅವನ ಸೋದರನ ಹಾಗೆ ಅವನಿಗೂ ಓಟದಲ್ಲಿ ರಕ್ತಗತವಾದ ಚಾಣಾಕ್ಷತನವಿತ್ತು. ಅವನು ಏನೇ ಮಾಡಿದರೂ ನೋಡುವವರಿಗೆ ಅದು ಸುಲಭವಾಗಿ ತೋರುತ್ತಿತ್ತು. ಗೋಲ್ಡಿನ್ ಹುಡುಗರಲ್ಲಿ ಯಾರು ಚೆಂಡನ್ನು ಹಿಡಿಯದೇ ನೆಲಕ್ಕೆ ಬೀಳಿಸಿದವರಲ್ಲ, ಹಿಡಿಯುವಾಗ ತಡವರಿಸಿದವರಲ್ಲ; ಒತ್ತಡದಲ್ಲೂ ಅವರು ತಪ್ಪು ಮಾಡಿದವರಲ್ಲ; ಯಾವ ಪಂದ್ಯದಲ್ಲೂ ಅವರ ಆಟದಲ್ಲಿ ದೋಷವೆಂಬುದು ನುಸುಳುತ್ತಿರಲಿಲ್ಲ. ಒಂದೇ ಮಾತಿನಲ್ಲಿ ಅವರನ್ನು ವರ್ಣಿಸಬಹುದಾದರೆ ಅವರಿಬ್ಬರೂ 'ಗಿಫ್ಟೆಡ್' ಆಟಗಾರರು.

ನಾನು ಚಿಕ್ಕವನಾಗಿದ್ದಾಗ ಗೋಲ್ಡಿನ್ ಕುಟುಂಬದ ಜನರೆಲ್ಲ ಒಂದಲ್ಲ ಒಂದು ವಿಧದಲ್ಲಿ ಪ್ರತಿಭಾವಂತರಾಗಿದ್ದರು, ಅಥವಾ ನನಗೆ ಹಾಗನ್ನಿಸುತ್ತಿತ್ತು. ಅವರ ಟೇಬಲ್‌ನ ಮೇಲೆ ಬಡಿಸಿದ ಭೋಜನ ಹೆಚ್ಚು ರುಚಿಕರವಾಗಿರುತ್ತಿತ್ತು. ಅವರ ಗರಾಜಿನಿಂದ ಹೊರಡುವ ಕಾರುಗಳು ಇತರರ ಕಾರುಗಳಿಗಿಂತ ಹೆಚ್ಚು ಸುಂದರವಾಗಿರುತ್ತಿದ್ದವು, ಅಲ್ಲದೆ ಅವು ಮನೆಯಿಂದ ಹೊರಟು ಎಂತೆಂಥವೋ ರಮ್ಯತಾಣಗಳ ಕಡೆ ಓಡುತ್ತಿದ್ದವು. ಅವರ ಬದುಕಿನಲ್ಲಿರಬಹುದಾದ ಆಶ್ಚರ್ಯಗಳು ಯಾವಾಗಲೂ ಅಪ್ಯಾಯಮಾನವಾದುವುಗಳೇ ಆಗಿರುತ್ತಿದ್ದವು. ಗೋಲ್ಡಿನ್‌ರಿಗೆ ಸರ್ವೇಸಾಮಾನ್ಯವಾದ ಸಂಗತಿಗಳು ನನ್ನಲ್ಲಿ ಹುಚ್ಚೆಬ್ಬಿಸುತ್ತಿದ್ದವು. ಒಂದು ದಿನ ನಾನು ಬಡಿ ಜೊತೆ ಶಾಲೆಯಿಂದ ನೇರವಾಗಿ ಅವರ ಮನೆಗೆ ಹೋದೆ, ನೆಲಮಾಳಿಗೆಯ ಅವರ ತಣ್ಣಗಿನ ಹಸಿರು ಮತ್ತು ಬಿಳಿ ಬಣ್ಣ ಬಳಿದ ಕೊಠಡಿಗೆ ಹೋದಾಗ ಅಲ್ಲಿ ಅವರ ತಂದೆ ಮತ್ತು ಇನ್ನೊಂದು ಮೂರು ನಾಲ್ಕು ಜನ ಸೇರಿ ಇಸ್ಪೀಟು ಆಡುತ್ತಾ ಕುಳಿತಿದ್ದರು. ತಕ್ಷಣವೇ ಬಡಿ ನನ್ನನ್ನು ಆ ಮೂವರಿಗೂ ಪರಿಚಯ ಮಾಡಿಕೊಟ್ಟ. ಅವರಲ್ಲೊಬ್ಬರು ಸಿಡ್ ಲಕ್‌ಮನ್ ಶಿಕಾಗೋ ಬೇರ್ಸ್ ತಂಡದಲ್ಲಿ ಕ್ವಾರ್ಟರ್ ಬ್ಯಾಕ್ ಆಡುತ್ತಿದ್ದವ; ತಲೆ ಮೇಲೆತ್ತದೆಯೇ ಇಸ್ಪೀಟ್ ಆಡುತ್ತಲೇ "ನೈಸ್ ಟು ಮೀಟ್. ಫಿಲ್" ಎಂದು ನ್ಯೂಯಾರ್ಕ್ ಉಚ್ಚಾರಣೆಯಲ್ಲಿ ಎತ್ತರವಾಗಿ ಹೇಳಿದ. ಇನ್ನೊಂದು ಸ್ವಲ್ಪ ಹೊತ್ತಿನ ನಂತರ ನಾನು ಎಡಿಯ ಕೊಠಡಿಯ ಕಡೆಯಿಂದ ಹೊರಗೆ ದೃಷ್ಟಿ ಹರಿಸಿದಾಗ ನೀಲಿ ಫ್ಲೀಟ್‌ವುಡ್ ಕಾರನ್ನು ಹತ್ತಿ ಸಿಡ್ ಮತ್ತು ಜೀನ್ ಗೋಲ್ಡಿನ್ ಮತ್ತೊಬ್ಬಳು ಪರಿಚಯಸ್ಥ ಹೆಂಗಸಿನೊಡನೆ ಕುಳಿತು ಹೊರಡುತ್ತಿರುವುದು ಕಂಡಿತು. "ನಾನೆಂದು ಕೊಂಡಿರೋ ಹೆಂಗಸೇನಾ ಅವಳು?" ಅಂತ ನಾನು ಕಿಟಕಿಯ ಬಳಿ ಬಂದ ಎಡಿಯನ್ನು ಕೇಳಿದೆ. "ಹೌದು", ಅವ ಉತ್ತರಿಸಿದ, "ಅವಳ ಹೆಸರು ಮಿರ್ಣಲಾಯ್ ಅಂತ. ನಮ್ಮ ತಂದೆಯ ಕಕ್ಷಿಗಾರ್ತಿ ಆಕೆ."

ಗೋಲ್ಡಿನ್, ಓ ಕೊನೂರ್ ಮತ್ತು ಕೋರ್ಜಿನೋಸ್ಕಿ ಫರ್ಮ್‌ನಲ್ಲಿ ವಕೀಲನಾದ ಸಿಡ್ ಗೋಲ್ಡಿನ್ ಸೀನಿಯರ್ ಪಾರ್ಟ್‌ನರ್. ಆದರೆ ಅವನ ವಕೀಲಿ ಮಾತ್ರ ವಿಚಿತ್ರ

ವಾದದ್ದು. ನಾನ ಕ್ರಮೇಣ ಅರಿತುಕೊಂಡಂತೆ ಅವನೆಂದೂ ಕೋರ್ಟ್‌ರೂಮನ್ನು ಪ್ರವೇಶಿಸಿದವನಲ್ಲ, ಮತ್ತು ಎಂದೂ ಕಾನೂನು ದಾಖಲುಗಳನ್ನು ಬರೆಯುವುದರಲ್ಲಾಗಲೀ ಓದುವುದರಲ್ಲಾಗಲೀ ತನ್ನ ದೃಷ್ಟಿಯನ್ನು ಮಂಜು ಮಾಡಿಕೊಂಡವನಲ್ಲ. ಉತ್ತಮವಾದ ಕನೆಕ್ಷನ್ ಹೊಂದಿದ್ದ ಆತ ದೂರದೂರದ ಪಾರ್ಟಿಗಳನ್ನು ಪರಸ್ಪರರ ಲಾಭಕ್ಕಾಗಿ ಹತ್ತಿರ ತರುವುದರಲ್ಲಿ ನಿಸ್ಸೀಮನಾಗಿದ್ದ. ಒಬ್ಬ ವ್ಯಕ್ತಿಯಿಂದ ಏನಾದರೊಂದು ಕೆಲಸವಾಗುತ್ತದೆ ಎಂದು ಗೊತ್ತಾದರೆ ಆ ವ್ಯಕ್ತಿಯನ್ನು ಬಲ್ಲ ವ್ಯಕ್ತಿಯನ್ನು ಅರಿತವನಾಗಿರುತ್ತಿದ್ದ. ಅವನ ಕಕ್ಷಿಗಾರರಲ್ಲಿ ಬಹಳ ಪ್ರಸಿದ್ಧರಾದವರಿದ್ದರು. ಅವರ ಪೈಕಿ ಶಿಕಾಗೋ ರಾಜಕಾರಣಿಗಳು, ಪಾಜಿ ಓಟಗಾರರು ಮತ್ತು ಸಿನೇಮಾ ಪ್ರಪಂಚದ ಮಂದಿ ಸೇರಿದ್ದರು. "ಸರ್ವಸಮರ್ಥ ಅಟಾರ್ನಿ ಸಿಡ್ನಿ ಗೋಲ್ಡ್‌ಸ್ಟೀನ್" ಎಂಬುದಾಗಿ ಸ್ಥಳೀಯ ವೃತ್ತಪತ್ರಿಕೆಯ ಕಲಮುಗಳಲ್ಲಿ ಆಗಿಂದಾಗ್ಯೆ ಅವನ ಹೆಸರು ಅಚ್ಚಾಗುವುದು.

ಇಲಿನಾಯ್ ವಿಶ್ವವಿದ್ಯಾನಿಲಯದ ವ್ಯಾಸಂಗದ ನಂತರ ಸಿಡ್‌ಗೋಲ್ಡ್‌ಸ್ಟೀನ್ ರಾತ್ರಿ ಕಾನೂನು ಕಾಲೇಜಿಗೆ ಸೇರಿಕೊಂಡಿದ್ದ, ಹಗಲು ಹೊತ್ತು ಅವನ ತಾಯಿಯ ತಮ್ಮನ ಫರ್ನಿಚರ್ ಅಂಗಡಿಯಲಿ ಪೀಠೋಪಕರಣಗಳ ಮಾರಾಟದ ಕೆಲಸ. ಫರ್ನಿಚರ್ ಅಂಗಡಿಯಲ್ಲಿ ಕೆಲಸ ಮಾಡುತ್ತಲೇ, ಕಾನೂನು ಅಭ್ಯಾಸ ಮಾಡುವ ಕಾಲಕ್ಕೆ ಜೀನ್ ಗೋಲ್ಡ್‌ಸ್ಟೀನಳ ಭೆಟ್ಟಿಯಾದ. ಪ್ರೇಮಿಸಿದ ನಂತರ ವಿವಾಹವಾದ: ಜೀನ್‌ಗೋಲ್ಡ್‌ಸ್ಟೀನ್ ನ್ಯಾಯಾಧೀಶ ಅರ್ವಿಂಗ್ ಗೋಲ್ಡ್‌ಸ್ಟೀನ್‌ನ ಒಬ್ಬಳೇ ಮಗಳು. ಶಿಕಾಗೋದ ಸ್ಥಳೀಯ ನ್ಯಾಯಾಧೀಶರು ಬಹಳ ಪ್ರಭಾವಶಾಲಿಗಳಾಗಿದ್ದ 1930ರ ದಶಕದ ಮಧ್ಯಭಾಗ. ತನ್ನ ಭಾವಿ ಮಾವನ ಜೊತೆಯಲ್ಲಿ ಟ್ರಾಫಿಕ್ ಜಾಮ್‌ನಲ್ಲಿ ಸಿಕ್ಕಿಹಾಕಿಕೊಂಡಿದ್ದು ನೆನಪಾಯಿತು. ಬೇಸ್ರ್ ಪಂದ್ಯವನ್ನು ನೋಡಲು ಅವರು ಹೊರಟಿದ್ದರು. ಜಡ್ಜ ಗೋಲ್ಡ್‌ಸ್ಟೀನ್ ಸಂಚಾರಿ ಪೋಲೀಸ್ ಪೇದೆಯನ್ನು ಕೂಗಿ, "ಜಡ್ಜ ಗೋಲ್ಡ್‌ಸ್ಟೀನ್, ಗಾಡ್ಯಾಮಿಂಟ್", ರಿಗ್ಲಿ ಫೀಲ್ಡ್‌ಗೆ ತನಗೆ ಲೇಟಾಗಬಾರದೆಂದೂ ಹಾಗೂ ಎಸ್ಕಾರ್ಟ್ ಬೇಕೆಂದು ಕೇಳಿದ್ದ. ಹಿಂದು ಮುಂದು ನೋಡದೆ ಪೇದೆ ಹೇಳಿದ, "ನನ್ನನ್ನು ಹಿಂಬಾಲಿಸಿ ಸರ್." ಸೈರನ್ನನ್ನು ಜೋರಾಗಿ ಹಾಕಿಕೊಂಡು ರಾಂಗ್ ಸೈಡಿನಿಂದಲೇ ನಾಗಾಲೋಟದಲ್ಲಿ ಹೊರಟಾಗ ಕೆಂಪು ದೀಪಗಳ ಸಿಗ್ನಲ್ಲನ್ನು ಕೂಡ ಅವರು ಲೆಕ್ಕಿಸಿರಲಿಲ್ಲ.

ಜೀನ್ ನ್ಯಾಯಾಧೀಶನ ಪ್ರೀತಿಯ ಮಗಳಾಗಿದ್ದರಿಂದ ಅವಳ ಆಯ್ಕೆಯ ಗಂಡನನ್ನು ಮರುಮಾತಿಲ್ಲದೆ ಒಪ್ಪಿಕೊಂಡಿದ್ದ. ಬಿಗ್‌ಟೆನ್ ಅಥ್ಲೀಟ್‌ಗಳಲ್ಲಿ ಒಬ್ಬನಾಗಿದ್ದ ವ್ಯಕ್ತಿಯನ್ನು ಅಳಿಯನನ್ನಾಗಿ ಪಡೆಯಲು ಅವನಿಗೆ ಹೆಮ್ಮೆ ಎನಿಸಿತ್ತು. ಈ ಯುವಕ ಮಹತ್ವಾಕಾಂಕ್ಷೆಯುಳ್ಳವನೆಂದೂ, ಮೈಗಳ್ಳನಲ್ಲವೆಂದೂ ಅವನಿಗೆ ಮನವರಿಕೆಯಾಗಿತ್ತು. ಸಿಡ್ ಗೋಲ್ಡ್‌ಸ್ಟೀನ್ ಮದುವೆಯಾದ ರೀತಿಯಿಂದಾಗಿ ಅತ್ಯಂತ ಕೆಳ ಹಂತದಿಂದ ಮೇಲೆ ಏರುವ ಕಾಲಕ್ಷೇಪದ ಸಾಹಸವನ್ನು ನಿವಾರಿಸಲು ಅನುಕೂಲವಾಗಿತ್ತು.

ಕಾನೂನು ಕಾಲೇಜಿನಿಂದ ಹೊರ ಬೀಳುತ್ತಿರುವಂತೆಯೇ ಅವನ ಮಾವ ಅನೇಕ ಉತ್ತಮವಾದ ಮಾರ್ಗಕ್ಕೆ ಅವನನ್ನು ಹಚ್ಚಿದ್ದ. ತಾನೇ ಸ್ವಯಂ ನ್ಯಾಯಾಧೀಶನಾಗಿದ್ದದ್ದರಿಂದ ತನ್ನ ಪ್ರಭಾವದಿಂದ ಗೋಲ್ಡಿನ್‌ಗೆ ಅನಾಯಾಸವಾಗಿ ಕಕ್ಷಿಗಾರರು ಸಿಗುವಂತೆ ಅನುಕೂಲವಾಗಿತ್ತು. 1942ರಲ್ಲಿ ಅಮೆರಿಕಾ ಯುದ್ಧದಲ್ಲಿ ಇರುವ ಕಾಲಕ್ಕೆ ಸೈನ್ಯದಲ್ಲಿ ಮೇಜರ್ ಆಗಿರುವಂತೆ ನೇಮಕಮಾಡಿದ್ದ. ವಾಸ್ತವವಾಗಿ ಶಿಕಾಗೋದಿಂದ ಇಪ್ಪತ್ತು ಮೈಲು ದೂರದ ಫೋರ್ಟ್‌ಶೆಂಡನ್‌ನ ಜಡ್ಜ್ ಅಡ್ವೊಕೇಟ್ ಕಛೇರಿಯಲ್ಲಿ ಅವನಿಗೆ ಕೆಲಸವಿತ್ತು. ಸಿಡ್‌ಗೋಲ್ಡಿನ್ ಪ್ರತಿರಾತ್ರಿ ನನ್ನ ಮನೆಯಲ್ಲೇ ಮಲಗಿ ಯುದ್ಧ ಮುಗಿಯುವ ವೇಳೆಗೆ ಕರ್ನಲ್ ಆಗಿ ಮಾರ್ಪಾಟಾಗಿದ್ದ. ನ್ಯಾಯಾಧೀಶ ಏನನ್ನು ಬೇಕಾದರೂ ಸಾಧ್ಯ ಮಾಡುವ ಸಾಮರ್ಥ್ಯ ಹೊಂದಿದ್ದ ; ಆದರೆ ಇಂಥ ಸರ್ವಶಕ್ತನಾದ ವ್ಯಕ್ತಿ ಫ್ರಿಜೆಲ್ ಎಂಬ ರೆಸ್ಟೊರೆಂಟ್‌ನಲ್ಲಿ ಊಟ ಮಾಡುವಾಗ ಗಂಟಲಿಗೆ ಮಾಂಸದ ತುಂಡು ಸಿಕ್ಕಿಕೊಂಡು ತನ್ನ ಅರವತ್ತೇಳನೇ ವಯಸ್ಸಿನಲ್ಲಿ ಸತ್ತಿದ್ದ. ಆ ಸಮಯದಲ್ಲಿ ಶಿಕಾಗೋ 'ಡೈಲಿನ್ಯೂಸ್'ನ ಅಂಕಣಕಾರ ಜಡ್ಜ್ ಆರ್ವಿಂಗ್ ಗೋಲ್ಡ್‌ಸ್ಟೀನ್ ಸುಖಜೀವನ ಹೆಚ್ಚಾಗಿ ಸತ್ತ ಎಂದು ಬರೆದಿದ್ದ (ಇಂಥ ಭೋಗಿಗಳ ಸಂತತಿ ಕಡಿಮೆಯಾದರೆ ಕ್ಷೇಮ ಎನ್ನುವ ದನಿ ಅವನ ಮಾತಿನಲ್ಲಿತ್ತು). ವಿಧುರನಾದ ಗೋಲ್ಡ್‌ಸ್ಟೀನ್ ತನ್ನ ಒಬ್ಬಳೇ ಮಗಳಿಗೆ ಬಿಟ್ಟು ಹೋದ ಎಸ್ಟೇಟ್‌ನ ಅಂದಾಜು ಬೆಲೆ 1.5 ಮಿಲಿಯನ್ ಡಾಲರ್‌ಗಳು—ಅದೂ 1957ನೇ ಇಸವಿಯಲ್ಲಿ.

ಗೋಲ್ಡಿನ್ ದಂಪತಿಗಳ ವಿಚಾರದಲ್ಲಿ ಹಣ ಎಂದರೆ ಪ್ರಾಣ ಎಂಬೇನೂ ಅಲ್ಲ. ನ್ಯಾಯಾಧೀಶ ಗೋಲ್ಡ್‌ಸ್ಟೀನ್‌ನ ಮಗಳಾಗಿ ಬೆಳೆದ ಜೀನ್ ಗೋಲ್ಡಿನ್ ಸಹಜವಾಗಿಯೇ ಆರಂಭದಿಂದಲೇ ಶ್ರೀಮಂತಿಕೆಯನ್ನು ಕಂಡಿದ್ದಳು. ಸಿಡ್ ಗೋಲ್ಡಿನ್ ಪ್ರಾಯಕ್ಕೆ ಬಂದಿದ್ದರೂ ಬಹಳ ಬೇಗ ಹಣ ಸಂಪಾದನೆ ಮಾಡಿದ್ದ. ಪರಿಣಾಮವಾಗಿ ಹಣದ ಬಗ್ಗೆ ಆತಂಕವಿರಲಿಲ್ಲ. ಗೋಲ್ಡಿನ್ ದಂಪತಿಗಳು ತಮಗೆ ಎಂದೂ ಹಣದ ಮುಗ್ಗಟ್ಟು ಆಗದು ಮತ್ತು ತಮ್ಮ ಐಶಾರಾಮ ಜೀವನಕ್ಕೆ ಎಂದೂ ತೊಂದರೆಯಾಗುವುದಿಲ್ಲ ಎಂದು ತಿಳಿದಿದ್ದರು. ವಾರಕ್ಕೆ ಏಳು ದಿನ ದುಡಿಯುತ್ತಾ ಮಕ್ಕಳು ಎಲ್ಲಿ ಮೇಣಾಗೀಣ ಕದ್ದುಬಿಟ್ಟಾರು ಎಂಬ ದಿಗಿಲಿನಲ್ಲೇ ಸದಾ ಇರುತ್ತಿದ್ದ ನಮ್ಮ ಅಪ್ಪನ ಬದುಕನ್ನು ಕಂಡಿದ್ದ ನನಗೆ ಗೋಲ್ಡಿನ್‌ರ ಬದುಕು ಬೆರಗುಂಟುಮಾಡಿತ್ತು. ನನ್ನ ತಾಯಿಯಾದರೋ ಬಿಳಿ ಬಣ್ಣದ ಕುರ್ಚಿಯೊಂದನ್ನು ಅನಂತಕಾಲದವರೆಗೆ ಕಾಪಾಡುವ ಕಾತರತೆಯಲ್ಲಿ ಜೀವ ಸವೆಸುತ್ತಿದ್ದಳು.

ಗೋಲ್ಡಿನ್‌ರ ಮನೆಯಲ್ಲೇ ನಾನು ಮೊದಲ ಬಾರಿಗೆ ಕ್ಲಬ್ ಸ್ಯಾಂಡ್‌ವಿಚ್, ಅಪರೂಪದ ರೋಸ್ಟ್ ಬೀಫ್ ಮತ್ತು ಮುಖ್ಯ ಭೋಜನದ ನಂತರ ಬಡಿಸಿದ ಸ್ಯಾಲಾಡ್, ಆದಾದ ಮೇಲೆ ಸ್ಟ್ರಾಬೆರಿ ಶಾರ್ಟ್ ಕೇಕ್—ಇವುಗಳನ್ನೆಲ್ಲ ಸವಿದಿದ್ದು. ಅವರೆಂದೂ ಸಾಧಾರಣವಾದ ಊಟವನ್ನು ಮಾಡಿದವರೇ ಅಲ್ಲ ಅಂತ ತೋರುತ್ತೆ—ಮನೆಯಲ್ಲಂತೂ ಚನ್ನಾಗೇ ಮಾಡಿ ತಿನ್ನುತ್ತಿದ್ದರು. ಜೀನ್ ಗೋಲ್ಡಿನ್‌ಳ ಅಸುಪಾಸಿ

ನಲ್ಲಿ ನಾನು ಸಂಚರಿಸುತ್ತಿದ್ದ ಆ ದಿನಗಳಲ್ಲಿ ನನಗೆ ಹದಿನೈದರ ಹರಯ. ಆಗಲೇ ನನ್ನ ಅರಿವಿಗೆ ಬಂದಿತ್ತು, ಬೆಳೆದ ಮಕ್ಕಳ ತಾಯಿಯಾದ ಒಬ್ಬಳು ಹೆಂಗಸು ಅಷ್ಟು ಆಕರ್ಷಕ ವಾಗಿರಬಹುದು ಎಂದು. ಸದಾ ನನ್ನ ಕಣ್ಣಮುಂದೆ ಇರುತ್ತಿದ್ದ ಉಳಿದ ತಾಯಂದಿರ ಚಿತ್ರವೆಂದರೆ ಒಂದು ಬಗೆಯ ಆತಂಕದಲ್ಲಿ ಸದಾ ಚಡಪಡಿಸುತ್ತಾ ಮನೆಗೇ ವಿಶಾಸಲಾದ ಉಡುಗೆ ತೊಟ್ಟು ಶತಪಥ ಇಕ್ಕುವುದು. ಜೀನ್ ಗೋಲ್ಡ್ವಿನ್, ಹಾಗೆ ನೋಡಿದರೆ ಭಾರಿ ಸುಂದರಿಯೇನಲ್ಲ; ಅವಳ ಹಲ್ಲುಗಳು ಕೊಂಚ ಉಬ್ಬಿದ್ದವು; ಅವಳ ಅಂಗ ಸೌಷ್ಠವವೂ ಅಷ್ಟೇನೂ ಕೋಮಲವಾಗಿ ತೋರುವಂಥದಲ್ಲ. ಯೂರೋಪಿನವರ ಮಾದರಿಯಲ್ಲಿ ಗುಂಗುರಲ್ಲದ ತನ್ನ ಕಪ್ಪುಕೂದಲನ್ನು ತುಂಡಾಗಿ ಕತ್ತರಿಸಿಕೊಂಡಿದ್ದಳು; ಯಾವಾಗಲೂ ಕಣ್ಣುಕೋರೈಸುವ ಬಣ್ಣದ ದುಬಾರಿ ಉಡುಗೆ ಉಡುತ್ತಿದ್ದಳು. ತನ್ನ ಬಿಡುವಿನ ವೇಳೆಯ ಹೆಚ್ಚು ಸಮಯವನ್ನು ಆಕೆ ಶ್ರೇಷ್ಠ ಮಟ್ಟದ ಗಾಲ್ಫ್ ಮೈದಾನ ದಲ್ಲಿ ಮತ್ತು ಟೆನ್ನಿಸ್ ಕೋರ್ಟುಗಳಲ್ಲಿ ಕಳೆದಿದ್ದರಿಂದ ಅವಳ ಮೈಕೈ ಕೊಂಚ ದುಂಡಗೆ ತುಂಬಿತ್ತಲ್ಲದೆ ಅವಳ ಚಲನವಲನದಲ್ಲಿ ಅಪೂರ್ವವಾದ ಚೆಂದವೂ ಇತ್ತು. ಅವರ ಮಕ್ಕಳ ಅತಿಥಿಯಾಗಿ ನಾನು ವಿನೆಸ್ಕಾದ ರಾಯಲ್ ಓಕ್ಸ್ ಕಂಟ್ರಿ ಕ್ಲಬ್‌ನಲ್ಲಿದ್ದಾಗ ಒಮ್ಮೆ ಆಕೆ ಕಪ್ಪು ಬಣ್ಣದ ಒನ್‌ಪೀಸ್ ಬೇತಿಂಗ್ ಸೂಟ್ ಧರಿಸಿ ಅತ್ಯಂತ ಏಕಾಗ್ರತೆ ಯಿಂದ ಡೈವಿಂಗ್ ಬೋರ್ಡಿನ ಮೇಲೆ ನಿಂತಿದ್ದು ಇನ್ನೇನು ಬಹಳ ಸಂಕೀರ್ಣವಾದ ಜಿಗಿತಕ್ಕೆ ತುದಿಗಾಲಲ್ಲಿದ್ದುದನ್ನು ಕಂಡಿದ್ದೆ. ಆ ದೃಶ್ಯ ಮತ್ತೆ ನೆನಪಿಗೆ ಬರುತ್ತಿದೆ. ಅದೇ ಸಮಯದಲ್ಲಿ ಸಿಡ್ ಗೋಲ್ಡ್ವಿನ್ ತನ್ನ ಮಾಜಿ ಕ್ರೀಡಾಪಟುವಿನ ಮೈಗೆ ಸನ್ ಟ್ಯಾನ್ ಎಣ್ಣೆ ಹಚ್ಚಿಕೊಳ್ಳುತ್ತಾ ಟ್ರಾನ್ಸಿಸ್ಟರ್‌ನಿಂದ ಎಳೆಯುರ ಆಟದ ವೀಕ್ಷಕ ವಿವರಣೆ ಕೇಳುತ್ತಿದ್ದ. ಆ ಕ್ಷಣದಲ್ಲಿ ನನ್ನ ಮನಸ್ಸಿನಲ್ಲಿ ಒಂದು ಆಲೋಚನೆ ಹೊಳೆಯಿತು, ಪ್ರಾಯಶಃ ಯಾವ ತಂದೆತಾಯಿಗಳ ಬಗ್ಗೆಯೂ ನಾನು ಆ ರೀತಿ ಯೋಚಿಸಿಲ್ಲ; ಮೈಗಾಡ್, ಇವರಿಬ್ಬರೂ ಎಂಥ ತುಂಬು ಲೈಂಗಿಕ ಜೀವನ ನಡೆಸುತ್ತಿರಬಹುದು!

ಬಡಿ ಮತ್ತು ಎಡಿಯ ಜೊತೆ ನಾನು ಶಾಲೆ ಕಲಿಯುತ್ತಿದ್ದ ಆ ನಾಲ್ಕು ವರ್ಷಗಳ ಅವಧಿಯಲ್ಲಿ ಗೋಲ್ಡ್ವಿನ್‌ರ ಕೂಡಿ ಐದು ಅಥವಾ ಆರು ಬಾರಿ ರಾಯಲ್ ಓಕ್‌ಗೆ ಭೇಟಿ ನೀಡಿರಬಹುದು, ಆದರೆ ನನ್ನ ಹದಿಹರೆಯದ ನೆನಪಿನಲ್ಲಿ ಹಸಿರಾಗಿ ಉಳಿ ದಿರುವ ನೆನಪು ಅದಾಗಿದೆ. ಶೆಂಡನ್ ರಸ್ತೆಯಲ್ಲಿ ಬಡಿ ಮತ್ತು ಎಡಿಯ ಜೊತೆ ಟಾಪ್ ತೆಗೆದ ಓಲ್ಡ್ಸ್ ಸ್ಟಾರ್‌ಫೈರ್ ಕಾರಿನಲ್ಲಿ ಕಂಳಿತು ದಟ್ಟ ಎಲೆಗಳಿಂದ ಕೂಡಿದ ಎಲ್ಮ್ ಮರಗಳ ಸಾಲುಗಳ ಮಧ್ಯೆ ಸ್ಟಾರ್‌ಫೈರ್‌ನ ಎಂಜಿನ್‌ನ ಶಬ್ದದೊಂದಿಗೆ ಸವಾರಿ ಮಾಡುವಾಗ ತಲೆಗೂದಲ ಮಧ್ಯೆ ತಂಗಾಳಿ ತೂರುವ ವಿಶಿಷ್ಟ ಅನುಭವವಾಗುತ್ತಿತ್ತು. ಶ್ರೀಮಂತಿಕೆ ತುಂಬಿ ತುಳುಕಾಡುವ ಆ ಕಂಟ್ರಿಕ್ಲಬ್‌ನ ಕಾರ್‌ಪಾರ್ಕಿಂಗ್‌ನಲ್ಲಿ ಕಣ್ಣು ಹಾಯಿಸಿದಾಗ ಸಾಧಾರಣವಾದ ಒಂದು ಕಾರೂ ಕಣ್ಣಿಗೆ ಬೀಳುತ್ತಿರಲಿಲ್ಲ. ಲಾಕರ್ ರೂಮಿನಲ್ಲಿನ ಪರಿಮಳ ಸೂಸುವ ದಪ್ಪದಪ್ಪನಾದ ಟವೆಲ್‌ಗಳು; ಬಿಳಿ ಶರಟು, ಶರಾಯಿ—ಅವರ ಹೊರ ಬದಿಗೆ ಮೇಲಿಂದ ಕೆಳಗಿನವರೆಗೂ ಹರಿವ ಚಿನ್ನದ ಬಣ್ಣದ

ಟೇಪು—ಈ ಸಮವಸ್ತ್ರ ತೊಟ್ಟ ಫಿಲಿಪೈನ್‌ನ ತರುಣರು ಕ್ಲಬ್‌ನ ಸದಸ್ಯರಿಗೆ ಡ್ರಿಂಕ್ಸ್, ಕಾರ್ಡ್ಸ್, ಹಣ್ಣುಗಳು ಅಥವಾ ಶರಬತ್ತು ತರುವುದು ಇಲ್ಲವೇ ಸದಸ್ಯರು ಏನು ಹೇಳಿದರೂ ಅದನ್ನು ಮಾಡುವುದನ್ನು ನೋಡುವುದೇ ಸೊಗಸು. ಸದಸ್ಯರು ಗಾಲ್ಫ್ ಆಡುವುದಕ್ಕೆ ಅಥವಾ ಈಜಲು, ಇಲ್ಲವೆಂದರೆ ಸ್ಟೀಮ್‌ಬಾತಿಗೆ ಹೊರಡಲು ಸಿದ್ಧರಾಗಿ ನಿಂತಾಗ ಅವರ ಬೂಟುಗಳಿಗೆ ಪಾಲಿಶ್ ಹಾಕುವುದು ಕೂಡ ಇವರ ಕೆಲಸ. ಗಾಲ್ಫ್ ಚೆಂಡುಗಳನ್ನು ಹೊಡೆದಾಗ ಉಂಟಾಗುವ ವ್ಯಾಪ್, ವ್ಯಾಪ್, ವ್ಯಾಪ್ ಶಬ್ದದೊಡನೆ ಟೆನ್ನಿಸ್ ಚೆಂಡುಗಳ ಪ್ಲೋಕ್, ಪ್ಲೋಕ್, ಪ್ಲೋಕ್ ಶಬ್ದ ಕೂಡಿಕೊಳ್ಳುತ್ತಿತ್ತು. ಊಟದ ಸಮಯದಲ್ಲಿನ ಶ್ರೀಮಂತಿಕೆ ಹೇಳತೀರದು. ಸೀಗಡಿ ಮೀನುಗಳ ಗಾತ್ರ, ಕೇಕ್ ಮತ್ತು ಕಸ್ಟರ್ಡ್‌ಗಳ ಸುಖ ! ತರಕಾರಿಗಳ ಅಂದ ಚೆಂದ, ರೋಸ್ಟ್ ಬೀಫನ್ನು ಬೇಯಿಸಿದ ಹದ (ನಾನು ಇದನ್ನೇ ಯಾವಾಗಲೂ ಆರ್ಡರ್ ಮಾಡುತ್ತಿದ್ದುದು) ಮತ್ತು ಊಟದ ನಂತರದ ಸಿಹಿ ತಿಂಡಿಗಳು, ಅದರಲ್ಲೂ ಐಸ್‌ಕ್ರೀಮ್‌ಗಳು. ಮೇಲೆ ಹೇಳಿದ ಕೇಕ್ ಮತ್ತು ಕಸ್ಟರ್ಡ್‌ಗಳು—ಈಗಲೂ ನೆನೆದರೆ ಬಾಯಲ್ಲಿ ನೀರೂರುತ್ತದೆ. ಗೋಲ್ಡಿನ್‌ರು ಸಾಮಾನ್ಯವಾಗಿ ಸಂಜೆ ಏಳುವರೆಗೆ ಊಟ ಮಾಡುತ್ತಿದ್ದುದು—ನನಗೆ ತಿಳಿದಂತೆ ವೆಸ್ಟ್ ರೋಜರ್ಸ್ ಪಾರ್ಕಿನ ಮಂದಿ ಆರುಗಂಟೆಗೇ ರಾತ್ರಿ ಊಟ ಮುಗಿಸಿಬಿಡುತ್ತಿದ್ದರು. ಒಂದು ಬಾರಿ ಮಾತ್ರ ಗೋಲ್ಡಿನ್‌ರ ಜೊತೆ ಊಟಮಾಡಿ ಮೇಲೇಳುವಾಗ ರಾತ್ರಿ ಒಂಭತ್ತೂವರೆ ಗಂಟೆ. ಮನಸ್ಸಿನಲಿ ಒಂದು ಬಗೆಯ ಪಾಪಪ್ರಜ್ಞೆ, ಕಾರಣ ನಮ್ಮ ಅಪ್ಪ ಆಗತಾನೆ ಔಷಧಿ ಅಂಗಡಿಯನ್ನು ಬಂದು ಮಾಡಲು ಹಿಂದುಗಡೆ ಬಾಗಿಲನ್ನು ಅಜಮಾಯಿಶಿ ಮಾಡುತ್ತಿದ್ದರು.

ಆ ದಿನಗಳಲ್ಲಿ ಬಡಿಯಾಗಲೀ ಎಡಿಯಾಗಲೀ ಗಾಲ್ಫ್ ಆಡುತ್ತಿರಲಿಲ್ಲ; ತರುಣಾಯದಲ್ಲಿ ಬಡಿ ಬಹಳ ಹೆಚ್ಚು ಬಾಜಿಯ ಗಾಲ್ಫ್ ಆಡುತ್ತಿದ್ದನೆಂದು ಕೇಳಿ ಬಲ್ಲೆ. (ಇಸ್ಪೀಟಾಟದಲ್ಲಿ ಸಾವಿರಾರು ಡಾಲರುಗಳ ಭಾರಿ ಹಣ ಅಕ್ಕೆ ಈಕ್ಕೆ ಆಗುತ್ತಿದ್ದುದನ್ನು ನಾನು ಗಮನಿಸಿದ್ದೆ ; ಗಂಭೀರವಾದ ಇಂಡೋರ್ ಗೇಮ್ ಆಡುವವರಿಗೆ ಇಸ್ಪೀಟಾಟ ಇದ್ದೇ ಇತ್ತು). ನನ್ನನ್ನವರು ಕ್ಲಬ್ಬಿಗೆ ಕರೆದೊಯ್ದಾಗ ಚೆನ್ನಾಗಿ ಈಜಿ, ಸೂರ್ಯನಿಗೆ ಮೈಯೊಡ್ಡಿ, ಉಂಡು ತಿಂದಾದ ನಂತರ ಒಂದೊಂದು ಕಡೆ ಮೂವರಂತೆ ಅರ್ಧ ಕೋರ್ಟ್ ಬ್ಯಾಸ್ಕೆಟ್‌ಬಾಲ್ ಆಡುತ್ತಿದ್ದೆವು. ಸೋತ ಟೀಮಿನವರು ಕೋರ್ಟ್ ಬಿಡಬೇಕಾದುದು ಅನಿವಾರ್ಯವಾಗಿತ್ತು ; ಆದರೆ ನಾವು ಮೂವರು ಯಾವಾಗಲೂ ಗೆಲ್ಲುತ್ತಿದ್ದುದರಿಂದ ಕೋರ್ಟ್ ಬಿಡುವ ಪ್ರಮೇಯ ಬರುತ್ತಲೇ ಇರಲಿಲ್ಲ. ಎಡಿ ಗೋಲ್ಡಿನ್ ಅಷ್ಟೇನು ಎತ್ತರವಲ್ಲದಿದ್ದರೂ, ಮೈಕಟ್ಟು ಚೆನ್ನಾಗಿದ್ದುದರಿಂದ ಇಡೀ ಕೋರ್ಟಿನಲ್ಲೆಲ್ಲಾ ಓಡಾಡಿ ಎದುರಾಳಿಗಳನ್ನು ಅಪ್ರತಿಭರನ್ನಾಗಿ ಮಾಡುವ ಚಾಣಾಕ್ಷತನ ಹೊಂದಿದ್ದ. ಇನ್ನು ಬಡಿಯ ವಿಷಯ ; ಬಡಿಯಾದರೋ ಎಲ್ಲ ವಿಭಾಗದಲ್ಲೂ ನಿಸ್ಸೀಮ. ಆಡುವ ಸಮಯದಲ್ಲಿ ಅವನನ್ನು ನೋಡುವುದೇ ಒಂದು ಸೊಗಸು. ಕೋರ್ಟಿನಲ್ಲಿ ಅವನ ಒಂದೊಂದು ಚಲನೆಯೂ ಅತ್ಯಂತ ಸಹಜವಾಗಿ ಕಾಣುತ್ತಿತ್ತು ; ಅವನು ಸ್ವಪ್ರಯತ್ನ

ವಿಲ್ಲದೇ ಆಡುತ್ತಿರುವನೇ ಎಂದು ಭಾಸವಾಗುತ್ತಿತ್ತು. ಚೆಂಡನ್ನು ಕಸಿದುಕೊಳ್ಳುವ, ಅದನ್ನು ಪುಟಿಯುವ, ಗರ್‍ರನೆ ತಿರುಗಿ ಓಡಿ ಎಷ್ಟು ಬೇಕೋ ಅಷ್ಟೇ ನೆಗೆದು ಬುಟ್ಟಿಗೆ ಹಾಕುವ ಕಲೆ ವರ್ಣನಾತೀತ.

ಬಡಿ ಗೋಲ್ಡ್ಮನ್‌ಗೆ ಬ್ಯಾಸ್ಕೆಟ್ ಬಾಲೆಂದರೆ ಮೀನನ್ನು ನೀರಿಗೆ ಬಿಟ್ಟಷ್ಟು ಸುಲಭ; ಅವನ ಸಹಜ ಪಟುತ್ವಕ್ಕೆ ಹೇಳಿ ಮಾಡಿಸಿದ ಆಟ. ಇವಾನ್‌ಸ್ಟನ್ ಟಾನ್‌ಶಿಪ್ ಹೈಸ್ಕೂಲಿನಲ್ಲಿದ್ದಾಗಲೇ ಅವನು ಎಲ್ಲರ ಗಮನ ಸೆಳೆದಿದ್ದ: ನಂತರ ಅಯೋವಾ ವಿಶ್ವವಿದ್ಯಾನಿಲಯದಲ್ಲಿ ಇನ್ನೂ ಪ್ರಮುಖವಾದ ರಕ್ಷಕ ಸ್ಥಾನ ಸಿಕ್ಕಿತು. ಇ.ಟಿ.ಎಚ್.ಎಸ್.ನಲ್ಲಿ ಎಡಿ ಬೇಸ್‌ಬಾಲ್ ಆಡುತ್ತಿದ್ದ, 1950ರ ದಶಕದ ಮಧ್ಯ ಭಾಗದಲ್ಲಿ ಇ.ಟಿ.ಎಚ್.ಎಸ್. ದೇಶದಲ್ಲೇ ಉತ್ತಮವಾದ ಹತ್ತು ಟೀಮುಗಳಲ್ಲಿ ಒಂದೆಂದು ಆಯ್ಕೆಯಾಗಿತ್ತು. ನಮ್ಮ ತಂದೆ ಈ ಆಯ್ಕೆಯನ್ನು ಬಹಳ ನಿಗಾ ಇಟ್ಟು ಗಮನಿಸಿದ್ದಕ್ಕೆ ಕಾರಣ; ತಾನು ಇನ್ನಷ್ಟು ಹೆಚ್ಚು ಗೋಂದು ಮಾರಿ ಮತ್ತಷ್ಟು ವೃತ್ತಪತ್ರಿಕೆ ಮತ್ತು ಔಷಧಿ ಮಾರಿ ಹಣ ಸಂಪಾದಿಸಿದರೆ ಮಾತ್ರ ತನ್ನ ಮಗನನನ್ನು ಆ ಶಾಲೆಗೆ ಸೇರಿಸಬಹುದೆಂದು. ಆ ಶಾಲೆಯೇನೋ ಉತ್ತಮವಾದ ಶಾಲೆಯೇ: ನನಗೆ ಅಲ್ಲೇ ಗಣಿತಶಾಸ್ತ್ರ ಮತ್ತು ರಸಾಯನಶಾಸ್ತ್ರದಲ್ಲಿ ಒಳ್ಳೆಯ ಬುನಾದಿ ಸಿಕ್ಕಿದ್ದು; ಹಾಗಾಗಿ, ಮುಂದೆ ನಾನು ಮೆಡಿಕಲ್ ಸ್ಕೂಲು ಸೇರಲು ಬಹಳ ಅನುಕೂಲ ವಾಯಿತು. ಬಹಳ ಸ್ಪರ್ಧಾತ್ಮಕ ಪರಿಸರವಿದ್ದ ಶಾಲೆಯದು; ಇ.ಟಿ.ಎಚ್.ಎಸ್. ನಲ್ಲಿ ಅನೇಕ ಪ್ರತಿಭಾವಂತ ಮಕ್ಕಳಿದ್ದರು; ತುಂಬಾ ಗಂಭೀರವಾದ ವಾತಾವರಣ.

ಕ್ರೀಡಾರಂಗದಲ್ಲಿಯಂತೂ ಆ ಶಾಲೆ ಎಂದೂ ಹಿಂದೆ ಬೀಳುವಂಥದಲ್ಲ. ಅದರ ಓಟದ ವಿಭಾಗದ ಮಟ್ಟಿಗೆ ಹೇಳುವುದಾದರೆ ಅದು ಒಂದು ಪುಟ್ಟ ಕಾಲೇಜನ್ನೇ ಹೋಲುತ್ತಿತ್ತು. ಅದಕ್ಕೆ ನಿರಂತರವಾದ ಜಯದ ಪರಂಪರೆ ಇದ್ದದ್ದು ಇನ್ನೊಂದು ಕೋಡು. ಆಟೋಟದ ಸಲಕರಣೆಗಳೆಲ್ಲ ಬಹಳ ಉತ್ತಮ ಮಟ್ಟದವು. ನಾನಿದ್ದ ಕಡೆಯ ವರ್ಷ ಒಂದು ಅತ್ಯಾಧುನಿಕ ಪೆವಿಲಿಯನ್ ಕೂಡ ನಿರ್ಮಾಣವಾಯಿತು. ಅಲ್ಲಿನ ಸಂಪ್ರದಾಯದ ಪ್ರಕಾರ ಗೆಲುವು ತರದ ತರಬೇತುದಾರರ ಒಪ್ಪಂದವನ್ನು ಪುನರ್ನವೀಕರಿಸುತ್ತಿರಲಿಲ್ಲ ಬ್ಯಾಸ್ಕೆಟ್‌ಬಾಲ್ ಮತ್ತು ಫುಟ್‌ಬಾಲ್ ಪಂದ್ಯಗಳು ಸಹಸ್ರಾರು ಜನರನ್ನು ಆಕರ್ಷಿಸುತ್ತಿದ್ದವು. ಗೋಲ್ಡ್ಮನ್ ಹುಡುಗರು ಮಾತ್ರ ಎಂಥ ಒತ್ತಡದಲ್ಲೂ ಧೈರ್ಯಗೆಡದೆ ಆಡುತ್ತಿದ್ದರಲ್ಲದೆ ಹೆಚ್ಚು ಹೆಚ್ಚು ಯಶಸ್ಸುಗಳಿಸಿ ಆಶ್ಚರ್ಯವುಂಟು ಮಾಡುತ್ತಿದ್ದರು.

ಬಡಿ ಮತ್ತು ಎಡಿ ನನಗೆ ಬಹಳ ಅಚ್ಚುಮೆಚ್ಚಾಗಿದ್ದರಲ್ಲದೆ ನಾನು ಅವರ ಗೆಳೆಯ ಅಂತ ಇತರರು ತಿಳಿದುಕೊಂಡಿದ್ದದ್ದು ನನಗೆ ಹೆಮ್ಮೆ ಎನಿಸುತ್ತಿತ್ತು. ನನ್ನಲ್ಲಿ ಅವರೇನು ವಿಶೇಷ ಕಂಡರೋ ನನಗೆ ತಿಳಿಯದು. ಇತರರ ಅಂತಸ್ತಿನ ಬಗ್ಗೆ ಅವರು ಹೆಚ್ಚೇನೂ ತಲೆ ಕೆಡಿಸಿಕೊಳ್ಳುತ್ತಿರಲಿಲ್ಲ. ಬದುಕಿನಲ್ಲಿ ಅವರ ಸ್ಥಾನ ಅಷ್ಟು ಭದ್ರ ವಾಗಿತ್ತು. ತಮ್ಮ ವಲಯಕ್ಕೆ ಬಂದವರನ್ನು ಬೇಷರತ್ತಾಗಿ ಸ್ವೀಕರಿಸಿ ಮುಂದ

ವರೆಯುತ್ತಿದ್ದರು. ನಾನು ತೀರಾ ಭಿನ್ನವಾದ ಪರಿಸ್ಥಿತಿಯಲ್ಲಿ ಬೆಳೆಯುತ್ತಿದ್ದಾಗ್ಯೂ ನಾನು ನೆರೆಹೊರೆಯವನಾಗಿದ್ದೆ ; ಒಟ್ಟಿಗೇ ನಾವು ಬೆಳೆಯುತ್ತಿದ್ದೆವು. ಆ ಕಾಲದ ಲೆಕ್ಕಾಚಾರದ ಪ್ರಕಾರ ನಾನು 'ಸಭ್ಯ ಹುಡುಗ', ಅಂದರೆ, ಸುಳ್ಳು ಹೇಳುವವನಲ್ಲ, ಸಣ್ಣತನದವನಲ್ಲ, ಅಪಾಯಕಾರಿಯಲ್ಲ ಮತ್ತು ಜಂಭಗಾರನಲ್ಲ. ಇನ್ನಾವುದೇ ವಿಷಯದಲ್ಲಿ ನಾನು ಅಸಾಧಾರಣದವನಲ್ಲ ಎಂಬ ಸಂಗತಿಯಿಂದ ಗೋಲ್ಡಿನ್ ಹುಡುಗ ಹುಡುಗರಾಗಲೀ ಅವರ ತಂದೆತಾಯಿಗಳಾಗಲೀ ತಲೆಕೆಡಿಸಿಕೊಂಡಂತೆ ಕಾಣಲಿಲ್ಲ. ಅಂತಸ್ತಿನ ಬಗ್ಗೆ ಅವರು ಚಿಂತಿಸುವವರಲ್ಲ, ಒಂದು ವೇಳೆ ಸ್ವಲ್ಪವಾದರೂ ಅವರು ಇದರ ಪ್ರಜ್ಞೆ ಇದ್ದರೆ ನನ್ನನ್ನವರು ಖಂಡಿತಾ ಹತ್ತಿರ ಸೇರಿಸುತ್ತಿರಲಿಲ್ಲ.

ಶ್ರೀಮಂತರ ಸಮೀಪದಲ್ಲಿ ಸುಳಿದಾಡಿದರೆ ನನಗೆ ಕೇಡು ಎಂದು ಮಾತ್ರ ನಾನೆಂದುಕೊಂಡಿರಲಿಲ್ಲ; ಆದರೆ ಗೋಲ್ಡಿನ್ ಜನರ ಬದುಕಿನ ಶ್ರೀಮಂತಿಕೆಯನ್ನು ಕಂಡು ನಾನು ಬೆರಗಾಗಿದ್ದೆ ; ಅವರ ಪ್ರಯತ್ನವಿಲ್ಲದೆಯೇ ಎಲ್ಲವೂ ಅವರ ಕಾಲಬಳಿ ಬಂದು ಬೀಳುತ್ತದೆ ಎಂದು ನನಗನ್ನಿಸುತ್ತಿತ್ತು. ಇದರ ಜೊತೆಗೆ ಅವರ 'ಗ್ಲಾಮರ್' ಕೂಡ ನನ್ನನ್ನು ಆಕರ್ಷಿಸಿರಬೇಕು. ಸಿಡ್‌ಲಕ್‌ಮನ್ ಆಗಲೀ ಅಥವಾ ಮಿರ್ಣ ಲಾಯ್ ಆಗಲೀ ವಾಷ್‌ಟಿನಾ ಅವೆನ್ಯೂನ ಯಾವುದೇ ಮನೆಯಿಂದ ಹೊರಗೆ ಹೋಗುವ ದೃಶ್ಯವನ್ನು ನಾವು ಕಾಣಲಾರೆವು. ಎಲ್ಲಕ್ಕಿಂತ ಮಿಗಿಲಾಗಿ ಗೋಲ್ಡಿಂಗ್ ಮನೆಮಂದಿಗೆ ನಾನು ಸಂಪೂರ್ಣವಾಗಿ ಮರುಳಾಗಿದ್ದೆ, ಅದರಲ್ಲೂ ವಿಶೇಷವಾಗಿ ಬಡಿ ಮತ್ತು ಎಡಿ ಗೋಲ್ಡಿನ್‌ರ ಪ್ರತಿಭೆಗೆ ಶರಣಾಗಿದ್ದೆ. ನನ್ನ ತಂದೆ ಸರ್ವ ಪ್ರಯತ್ನ ಮಾಡಿದರೂ – ಆಲ್ಬರ್ಟ್ ಐನ್‌ಸ್ಟೀನ್ ಮತ್ತಿತರ ಯುಹೂದ್ಯ ವಿಜ್ಞಾನಿಗಳ ಸಂಶೋಧನೆ ಕುರಿತು ಅನೇಕ ವಿಚಾರಗಳನ್ನು ನನಗೆ ಆತ ತಿಳಿಸುತ್ತಿದ್ದ – ನನಗೆ ಮಾತ್ರ ಬೌದ್ಧಿಕ ಪ್ರತಿಭೆ ದೂರವೇ ಉಳಿಯಿತು ; ನನ್ನಲ್ಲಿ ಅಲ್ಪ ಸ್ವಲ್ಪ ಕಲೆ ಇತ್ತು ಎನ್ನಬಹುದಾದರೂ ನನ್ನ ವಾರಗೆಯ ಹುಡುಗರೊಡನೆ ಓಡಾಡಿಕೊಂಡು ಇರುವ ಕಾಲಕ್ಕೆ ನನ್ನಲ್ಲಿದ್ದ ಕಲೆಗಿಲೆಯ ಸ್ಪಷ್ಟವಾದ ಸುಳಿವು ನನಗಾಗಲಿಲ್ಲ. ಆದರೆ ಗೋಲ್ಡಿನ್ ಹುಡುಗರ ಪಟುತ್ವದ ಪ್ರತಿಭೆ ಎಲ್ಲರ ಕಣ್ಣಿಗೆ ಢಾಳಾಗಿ ಕಾಣುತ್ತಿತ್ತಲ್ಲದೆ ಎಲ್ಲರ ಮೆಚ್ಚುಗೆಯನ್ನೂ ಕೂಡ ಗಳಿಸಿತ್ತು. ನಾನಂತೂ ಅದನ್ನು ಬಹುವಾಗಿ ಮೆಚ್ಚಿಕೊಂಡಿದ್ದೆ. ಈಗ ನಾನು ನನ್ನ ನಲವತ್ತರ ಮಧ್ಯಭಾಗದಲ್ಲಿದ್ದರೂ ಅವರ ಕ್ರೀಡಾಪ್ರತಿಭೆಯನ್ನು ಇಂದೂ ಮೆಚ್ಚಿ ತಲೆದೂಗುತ್ತೇನೆ.

ಬಡಿ ಮತ್ತು ಎಡಿ ಗೋಲ್ಡಿನ್ ತಮ್ಮ ಕ್ರೀಡೆಯಲ್ಲಿ ತೋರುವ ಪರಸ್ಪರ ಹೊಂದಾಣಿಕೆ, ಶೀಘ್ರ ಪ್ರತಿಕ್ರಿಯೆ ಮತ್ತು ಅಂಗಸೌಷ್ಠವ ಇವುಗಳನ್ನು ಅವರು ತಮ್ಮ ತಂದೆತಾಯಿಗಳಿಂದ ಆನುವಂಶೀಯವಾಗಿ ಪಡೆದುಕೊಂಡಿರಬಹುದು. ಕೊರೆವ ಮಳೆ ಸುರಿಯುತ್ತಿದ್ದರೂ ಲೆಕ್ಕಿಸದೆ ಆರೇಳು ಜನ ಪ್ರತಿಸ್ಪರ್ಧಿಗಳನ್ನು ನಿವಾರಿಸಿಕೊಂಡು ನಲವತ್ತು ಗಜ ದೂರದಲ್ಲಿ ನಿಂತ ರಿಸೀವರನ ಕೈಗೆ ಗುರಿಕಟ್ಟಿ ಚೆಂಡು ಎಸೆಯುವ ಸಾಮರ್ಥ್ಯ ಅಷ್ಟು ಚಿಕ್ಕ ವಯಸ್ಸಿಗೇ ಎಡಿಗೆ ಹೇಗೆ ಬಂತು ? ಹನ್ನೆರಡು ಸಾವಿರ

ಸೀನಿಯರ್ ವರ್ಷ ನಮಗೆಲ್ಲಾ ಹರ್ಷದ ವರ್ಷ. ಎಡಿಗೆ ಕಾರ್ಡಿನಲ್ಸ್‌ನಿಂದ ಕರೆ ಬಂತು, ಹಾಗೆಯೇ ಮಿಶಿಗನ್ ವಿಶ್ವವಿದ್ಯಾನಿಲಯದಿಂದ ಫುಟ್‌ಬಾಲ್ ವಿದ್ಯಾರ್ಥಿ ವೇತನ ಸಿಕ್ಕಿತು ; ಬಡಿಗೆ ಮುಂವ್ವತ್ತಕ್ಕೂ ಮಿಕ್ಕು ಬ್ಯಾಸ್ಕೆಟ್‌ಬಾಲ್ ವಿದ್ಯಾರ್ಥಿವೇತನ ಗಳಿಗಾಗಿ ಆಹ್ವಾನ ಬಂತು. ಕಡೆಗವನು ಅಯೋವಾ ವಿಶ್ವವಿದ್ಯಾನಿಲಯವನ್ನು ಆರಿಸಿ ಕೊಂಡ; ನನಗೆ ಏಲ್‌ನಲ್ಲಿ ಸೀಟು ಸಿಕ್ಕಿತಾದರೂ ಮನೆಯಲ್ಲಿ ಹಣದ ಮುಗ್ಗಟ್ಟು ಜಾಸ್ತಿಯಾಗಿದ್ದುದರಿಂದ (ನನ್ನ ತಂಗಿ ಎಸ್ಕ್ಯಾನ್ಸಿನ್‌ಸಲ್ಲಿ ಜೂನಿಯರ್ ವರ್ಷಕ್ಕೆ ಕಾಲಿಡು ತ್ತಿದ್ದಳು) ಇಲಿನಾಯ್ ವಿಶ್ವವಿದ್ಯಾನಿಲಯದಲ್ಲಿ ಪ್ರೀ-ಮೆಡ್ ಮಾಡಲು ನಾನು ನಿರ್ಧರಿಸಿದೆ.

ಪದವಿ ಪರೀಕ್ಷೆ ಮುಗಿದ ಒಂದು ಶನಿವಾರ ಸಂಜೆ ತಮ್ಮ ಮಕ್ಕಳ ಗೌರವಾರ್ಥ ಸಿಡ್ ಮತ್ತು ಜೀನ್ ಗೋಲ್ಡಿನ್ ಒಂದು ಪಾರ್ಟಿ ಕೊಟ್ಟರು. ಅವರ ಮನೆಯ ಹಿಂಭಾಗದ ಲಾನ್ ಮೇಲೆ ದೊಡ್ಡದಾದ ಹಳದಿ ಬಿಳಿ ಪಟ್ಟೆಯ ಡೇರೆಯೊಂದು ತಲೆ ಯೆತ್ತಿತ್ತು. ಬಿಳಿ ಉಡುಪು ಧರಿಸಿ ತಲೆಗೆ ನೀಳವಾದ ಟೊಪ್ಪಿಗೆ ಏರಿಸಿದ ಮುಖ್ಯ ಅಡುಗೆಯ ಡೇರೆಯ ಒಂದು ಮೂಲೆಯಲ್ಲಿ ದೊಡ್ಡದಾದ ಟರ್ಕಿ, ಬೇಯಿಸಿದ ಹಂದಿ, ಇತ್ಯಾದಿಗಳನ್ನು ಮುಂದಿಟ್ಟುಕೊಂಡು ಕೊರೆಯಲು ತಯಾರಾಗಿದ್ದ. ಮೂರು ಪುಟ್ಟ ಪುಟ್ಟ ಬಾರ್‌ಗಳು ಆಗಲೇ ಕಾರ್ಯೋನ್ಮುಖವಾಗಿದ್ದವು : ಎರಡು ಡೇರೆಯ ಒಳಗೆ, ಇನ್ನೊಂದು ನೆಲಮಾಳಿಗೆಯಲ್ಲಿ. ಜನರ ಗುಂಪಿನಲ್ಲಿ ಸಿಡ್‌ಲಕ್‌ಮನ್ ಮತ್ತು ಅರ್ನಿ ಬ್ಯಾಂಕ್ಸ್ ಇರುವುದು ನನ್ನ ಕಣ್ಣಿಗೆ ಬಿತ್ತು. ಅವರಲ್ಲಿ ಕೆಲವರು ಸ್ಥಳೀಯ ಅಂಕಣ ಕಾರರಿದ್ದರು, ಸಂಜೆ ಐದನೇ ಚಾನಲ್‌ನಲ್ಲಿ ಸಮಾಚಾರ ಬಿತ್ತರಿಸುವವರಿದ್ದರು; ಹಾಗೆಯೇ ಸ್ಟ್ಯಾಂಡರ್ಡ್ ಆಯಿಲ್ ಆಫ್ ಇಂಡಿಯಾನ ಕಂಪನಿಯ ಮುಖ್ಯಸ್ಥನ ಹೆಂಡತಿ ಕೂಡ ಇದ್ದಳು. ಆ ಗುಂಪಿನಲ್ಲಿ ಯಾಕೋ ಏನೋ ಆರಾಮವಾಗಿ ಕಾಣದ ವ್ಯಕ್ತಿಯೊಬ್ಬನ ಕಡೆ ಕೈ ತೋರಿಸಿ ಬಡಿ ಗೋಲ್ಡಿನ್ ಹೇಳಿದ್ದ "ಅವನೇ ಬರ್ ಟಿಲ್ ಸ್ಟ್ರಾವ್ – ಗೊಂಬೆಯಾಟದವ." ಯಾವನೋ ವ್ಯಕ್ತಿಯೊಬ್ಬನನ್ನು ಅಪಹರಿಸಿದ್ದ ಕ್ಕಾಗಿ ಸೆರವಾಸದಲ್ಲಿದ್ದು ಬಂದಿದ್ದ ಇನ್ನೊಬ್ಬ ವ್ಯಕ್ತಿಯೊಡನೆ ಅವನು ಮಾತನಾಡುತ್ತಾ ನಿಂತಿದ್ದ. ಸೇವಕರು ಅಗಲಬಾಯಿನ ಲೋಟಗಳಲ್ಲಿ ಷಾಂಪೇನ್ ಸರಬರಾಜು ಮಾಡು ತ್ತಿದ್ದರು. ತಮ್ಮ ಬೇಸಗೆ ಉಡುಪುಗಳಲ್ಲಿ ಹೆಂಗಸರು ಜಗಜಗಾಯಮಾನವಾಗಿ ಹೊಳೆಯುತ್ತಿದ್ದರು. ಯಾವುದೋ ಒಂದು ಕ್ಷಣದಲ್ಲಿ ಅವರಲ್ಲೊಬ್ಬಳು ಸುಂದರಿ 'ಈ ಪೈಕಿ ಗೋಲ್ಡಿನ್‌ರು ಯಾರು ?' ಎಂದು ನನ್ನನ್ನು ಕೇಳಿದ ಕಾರಣ ನಾನು ಅವಳಿಗೆ ಉತ್ತರ ಕೊಡುತ್ತಿದ್ದೆ. ಬ್ಲ್ಯಾಕ್ ಸ್ಟೋನ್ ಥಿಯೇಟರ್‌ನಲ್ಲಿ 'ಮೈ ಫೇರ್ ಲೇಡಿ' ಪ್ರದರ್ಶಿಸುತ್ತಿದ್ದ ಸಂಚಾರಿ ಕಂಪನಿಯೊಂದರಲ್ಲಿ ಅವಳು ಕೆಲಸ ಮಾಡುತ್ತಿದ್ದಳು.

ಆ ಸಂಜೆ ಯಾರಾದರೂ ಭಾಷಣ ಮಾಡಿದ್ರಾ, ಏನಾದ್ರೂ ಬಹುಮಾನಗಳ ವಿತರಣೆ ಆಯಿತಾ, ಅಥವಾ ಆಗಿದ್ದರೆ ಯಾವ ರೀತಿಯಲ್ಲಿ ಮತ್ತು ಎಷ್ಟು ಹೊತ್ತಿಗೆ ಪಾರ್ಟಿ ಮುಗಿಯಿತು ಎನ್ನುವ ವಿವರ ನನಗೀಗ ನೆನಪಿಲ್ಲ. ನಾನಂತೂ ಮುಗಿಸಿ

ಹೊರಗೆ ಬಂದಾಗ ಗಂಟೆ ಹತ್ತಾಗಿತ್ತು. ಆದರೆ ನಂತರ ಎಡಿಗೋಲ್ಡಿನ್‌ನಿಂದ ನಾನು
ತಿಳಿದುಕೊಂಡಂತೆ ಜಾಗ ಖಾಲಿ ಮಾಡುವ ಮೊದಲು ನಾನು ಸುಮಾರು ಹನ್ನೊಂದು
ಹನ್ನೆರಡು ಲೋಟ ಶಾಂಪೇನ್ ಬಗ್ಗಿಸಿದ್ದೆನಂತೆ. ಜೀನ್ ಗೋಲ್ಡಿನ್‌ನ ಮುಂದೆ ನಿಂತು
ಏನೋ ಹಾಡು ಹೇಳುತ್ತಿದ್ದಾಗ ಜೀನ್ ನಾರ್ತ್‌ಸೈಡ್‌ನ ಭಾರಿ ನಿವೇಶನ ವ್ಯಾಪಾರಿ
ಯೊಬ್ಬನ ಜೊತೆ ಮಾತನಾಡುತ್ತಿದ್ದಳು. ಜೀನ್ ಗೋಲ್ಡಿನ್‌ಳ ಸೂಚನೆಯಂತೆ ಎಡಿ
ಮತ್ತು ಬಡಿ ಮೇಲ್ಮಹಡಿಯ ಅತಿಥಿ ಕೊಠಡಿಗೆ ನನ್ನನ್ನು ಕರೆದೊಯ್ದು ಮಲಗಿಸಿದಾಗ
ನಾನು ಬೆಳಗ್ಗೆ ಆರುವರೆ ಗಂಟೆಯವರೆಗೆ ಉಟ್ಟಬಟ್ಟೆಯಲ್ಲಿ ಮಲಗಿ ಬಿಟ್ಟಿದ್ದೆ. ಮುದ್ದೆ
ಮುದ್ದೆಯಾಗಿದ್ದ ಅಂಗಿ ತೊಟ್ಟು, ತಲೆಯ ಒಳಗೆಲ್ಲಾ ವಿಚಿತ್ರ ಮಂಕಿನಿಂದ ಆವೃತನಾಗಿ
ನಮ್ಮ ಮಹಡಿ ಮೆಟ್ಟಿಲೇರುವಾಗ ಸ್ಟೋರ್ ಬಾಗಿಲು ತೆರೆಯಲು ಸಿದ್ಧನಾಗಿದ್ದ
ಅಪ್ಪನ ಕಣ್ಣಿಗೆ ಸಿಕ್ಕಿ ಬಿದ್ದಿದ್ದೆ. ನನ್ನ ಹಣೆಯ ಮೇಲೆ ಲಘುವಾಗಿ ತನ್ನ ಹಸ್ತದ
ಹಿಂಭಾಗವನ್ನಿಟ್ಟು, "ಆರಾಮಿದೀಯ, ಫಿಲೀ" ಅಂತ ಕೇಳಿದ್ದ. ರಾತ್ರಿ ಬಹಳ ಹೊತ್ತು
ಎಚ್ಚರವಾಗಿದ್ದೆ ಅಂತ ಏನೋ ಉತ್ತರ ಕೊಟ್ಟ ನೆನಪು. ನನ್ನ ಪುಟ್ಟ ಕತ್ತಲು ಕೋಣೆ
ಯಲ್ಲಿ ದಪ್ಪನಾದ ದುಪ್ಪಟಿ ಹೊದ್ದಿಸಿದ ಹಾಸಿಗೆಯ ಬಳಿ ನಿಂತು ನಾನು ಉಟ್ಟಿದ್ದ
ಬಟ್ಟೆಯನ್ನು ಕಳಚಿ ನೆಲದ ಮೇಲೆ ಹಾಕುತ್ತಾ ನನ್ನ ಬದುಕಿನಲ್ಲೊಂದು ರಮ್ಯ
ಅಧ್ಯಾಯ ಮುಕ್ತಾಯವಾಯಿತೆಂದು ದುಃಖಿಸಿದೆ.

ಆ ಬೇಸಗೆಯಲ್ಲಿ ನನ್ನ ಮತ್ತು ಗೋಲ್ಡಿನ್ ಹುಡುಗರ ಸ್ನೇಹದ ಅಂತ್ಯ ಆರಂಭ
ವಾಯಿತು. ಏನೂ ತೊಂದರೆ ಸಂಭವಿಸಿರಲಿಲ್ಲ : ಯಾರೂ ಮಾತು ಬಿಟ್ಟಿರಲಿಲ್ಲ.
ಹುಡುಗರು ಹದಿನೆಂಟರ ಹೊಸಿಲು ತುಳಿದಾಗ ತಾವು ಜವಾಬ್ದಾರಿಯುತ ಯುವಕ
ರಾಗುತ್ತಿದ್ದೇವೆಂದು ಭಾವಿಸಿ ಒಬ್ಬರಿಂದ ಒಬ್ಬರು ದೂರವಾಗುವ ಸಹಜ ಕ್ರಿಯೆಗೆ ಒಳ
ಗಾಗಿದ್ದೆವು. ಗ್ರಾಜುಯೇಷನ್ ಆದಮೇಲೆ ಎರಡು ದಿನಗಳ ನಂತರ ಫ್ಲೋರೀಡಾದ
ಸಾರಸೋಟ ಫಾರ್ಮ್ ಕ್ಲಬ್ಬಿಗೆ ಎಡಿ ಗೋಲ್ಡಿನ್ ಸೇರಿಕೊಂಡ. ಬಡಿ ಗೋಲ್ಡಿನ್
ರೇ ಮೆಯರ್ಸ್‌ನ ಬೇಸಗೆಯ ಬ್ಯಾಸ್ಕೆಟ್‌ಬಾಲ್ ಕ್ಯಾಂಪಿನಲ್ಲಿ ತರಬೇತುಗಾರನಾಗಿ ಸೇರಿ
ಕೊಂಡ. ಅಲ್ಲಿ ಡಿಪಾಲ್, ಲೊಯೊಲಾ ಮತ್ತು ಇಲಿನಾಯ್ ತಂಡಗಳಲ್ಲಿ ಆಡುತ್ತಿದ್ದ
ಆಟಗಾರರಿಗೆ ತರಬೇತಿ ಕೊಡುವ ಕೆಲಸ. ನಂತರ ಚಳಿಗಾಲದಲ್ಲಿ ಅವನು ಅಯೋವಾಕ್ಕೆ
ಹೊರಟು ಹೋದ. ನನ್ನ ಮಟ್ಟಿಗೆ ಹೇಳುವುದಾದರೆ ಔಷಧಿ ಅಂಗಡಿಯಲ್ಲಿ ವಾರಕ್ಕೆ
ನಲವತ್ತು ಗಂಟೆಗಳ ಪ್ರಕಾರವಾಗಿ ಪ್ರತಿಯೊಂದು ವಿಭಾಗದ ಕೆಲಸವನ್ನೂ ಮಾಡುತ್ತಾ
"ಒಂದು ಸಾರಿ ವೈದ್ಯನಾಗಿಬಿಟ್ಟರೆ ಜೀವನ ಎಷ್ಟು ಮಜ ಗೊತ್ತ" ಅಂತ ಅಪ್ಪ ಹೇಳು
ವುದನ್ನು ಕೇಳಿಸಿಕೊಳ್ಳುತ್ತಾ ಇರುತ್ತಿದ್ದೆ.

ನನ್ನ ಹಾಗೂ ಎಡಿ ಮತ್ತು ಬಡಿ ಗೋಲ್ಡಿನ್‌ರ ನಡುವಿನ ಸ್ನೇಹದ ಬಗ್ಗೆ
ಹಿಂತಿರುಗಿ ನೋಡಿದಾಗ ಅದು ಎಷ್ಟು ಕೃತಕವಾಗಿತ್ತೆಂದು ನೆನೆದು ಆಶ್ಚರ್ಯವಾಗು
ತ್ತದೆ. ನಾವು ಹೈಸ್ಕೂಲಿಗೆ ಹೋಗುವ ಕಾಲಕ್ಕೆ ನಾಲ್ಕು ವರ್ಷದಲ್ಲಿ ಮೂರು ವರ್ಷ
ಕಾಲ ಪ್ರತಿದಿನ ಬೆಳಗ್ಗೆ ಒಟ್ಟಿಗೇ ಕಾರಿನಲ್ಲಿ ಹೊರಡುತ್ತಿದ್ದೆವು. ನಾವು ಮಾತನಾಡು

ತ್ತಿದ್ದುದಾದರೂ ಏನು ? ಆಟೋಟಗಳ ಬಗ್ಗೆಯೇ ಹೆಚ್ಚು ಮಾತು. ಹುಡುಗಿಯರ ಬಗ್ಗೆ ಅಷ್ಟಾಗಿ ಇಲ್ಲ. ಶುಕ್ರವಾರ ಸಂಜೆ ಸಾಮಾನ್ಯವಾಗಿ ಸಿನೇಮಾಕ್ಕೆ ಹೋಗುತ್ತಿದ್ದೆವು. ಟಿಕೆಟ್ ಕೊಳ್ಳಲು ಸಿಡ್ ಗೋಲ್ಡಿನ್‌ಗೆ ಎಂದೂ ಸಮಸ್ಯೆಯಾಗಿರಲಿಲ್ಲವಾಗಿ ಯಾವುದಾದರೂ ದೊಡ್ಡ ಕ್ರೀಡಾಕೂಟಕ್ಕೆ ಹೋಗುವಾಗ ಅವರ ಜೊತೆ ನನ್ನನ್ನೂ ಕರೆದುಕೊಂಡು ಹೋಗುತ್ತಿದ್ದರು. ಹುಡುಗಿಯರ ಜೊತೆ ನಾವು ಯಾರೂ ಹೆಚ್ಚು ಹೋಗುತ್ತಿರಲಿಲ್ಲ. ನಾವು ಯಹೂದ್ಯರಾದ್ದರಿಂದ ಇ.ಟಿ.ಎಚ್.ಎಸ್.ನಲ್ಲಿ ಅಲ್ಪ ಸಂಖ್ಯಾತರು ; ಒಂದು ವೇಳೆ ನಾವು ಶಿಕಾಗೋದ ಸೆನ್ ಅಥವಾ ಸಲ್ಲಿವನ್ ಹೈಸ್ಕೂಲುಗಳಿಗೆ ಹೋಗಿದ್ದರೆ ಪರಿಸ್ಥಿತಿ ಹೀಗಾಗುತ್ತಿರಲಿಲ್ಲ. ಗೋಲ್ಡಿನ್ ಹುಡುಗರಲ್ಲಿ ಒಬ್ಬರೂ ತಮ್ಮ ತಂದೆತಾಯಿಗಳ ಬಗ್ಗೆ ಹೆಚ್ಚು ಮಾತನಾಡುತ್ತಿದ್ದಿಲ್ಲ; ಪ್ರಾಯಶಃ ಅವರು ಇಬ್ಬರೇ ಇರುವಾಗಲೂ ಕೂಡ ಅವರ ಬಗ್ಗೆ ಮಾತನಾಡುತ್ತಿರಲಿಲ್ಲ ಎಂದು ನನ್ನ ಊಹೆ. ತುಂಬಾ 'ಗ್ಲಾಮರಸ್' ಅಂತ ಅಂದುಕೊಂಡ ಅವರ ಬದುಕನ್ನು ಇವರಿಬ್ಬರೂ ಬಹಳ ಸಹಜವೆಂಬಂತೆ ತೆಗೆದುಕೊಂಡಿದ್ದರು ; ಮೇಲಾಗಿ ಇದಕ್ಕಿಂತ ಭಿನ್ನವಾದ ಬೇರೆ ಬದುಕು ಅವರಿಗೆ ಗೊತ್ತಿರಲಿಕ್ಕೆ ಸಾಧ್ಯವಿರಲಿಲ್ಲ. ಜಗತ್ತಿನಲ್ಲೇ ಅತ್ಯಂತ ಅದೃಷ್ಟವಂತ ಮಕ್ಕಳು ಅವರು ಎಂದು ನಾನು ಲೆಕ್ಕ ಹಾಕಿದ್ದೆ. ಅವರ ಬಳಿ ಸುಳಿದಾಡುವುದೂ ಕೂಡ ನನ್ನ ಅದೃಷ್ಟ, ಅದು ನನ್ನ ಪ್ರತಿಷ್ಠೆ ಅಂತ ನಾನು ತಿಳಿದುಕೊಂಡಿದ್ದೆ.

ಪಂದ್ಯಾಟಗಳು, ಐಭೋಗ ಮತ್ತು ದುಬಾರಿಯಾದ ಪ್ರವಾಸ ಅತ್ಯಂತ ಸಹಜವಾಗಿ ಗೋಲ್ಡಿನ್ ಮಂದಿಗೆ ತೋರುತ್ತಿತ್ತು. ಬಡಿ ಮತ್ತು ಎಡಿ ಹುಟ್ಟಿ ಬೆಳೆದದ್ದು ಇಂಥ ಸಮೃದ್ಧ ಸನ್ನಿವೇಶದಲ್ಲಿ. ತಮ್ಮ ಓಟದ ಶೂಗಳನ್ನು ಅವರು ನೇತು ಹಾಕಿ ನಿವೃತ್ತರಾದ ಬಳಿಕ ಇವರಿಬ್ಬರೂ ಸುಖದ ಜೀವನಕ್ಕೆ ಕಾಲಿಡುತ್ತಾ, ದೊಡ್ಡ ದೊಡ್ಡವರ ಸಂಪರ್ಕ ಹೊಂದಿ ಸ್ವಯಂ ಕ್ರೀಡಾಪಟುಗಳಾದ ಹೆಂಡಂದಿರನ್ನು ಪಡೆದು ತುಂಬು ಸಂಸಾರದಲ್ಲಿ ಹಾಯಾಗಿ ಕಾಲಕಳೆಯುತ್ತಾರೆಂದು ನನಗಾಗ ಅನಿಸಿತ್ತು. ಏನಾದರೊಂದು ದೊಡ್ಡ ಖಾಯಿಲೆಯೋ ಅಥವಾ ಆರ್ಥಿಕವಾಗಿ ಚೇತರಿಸಿಕೊಳ್ಳಲಾಗದ ದೊಡ್ಡ ಅನಾಹುತ ಸಂಭವಿಸದ ಪಕ್ಷದಲ್ಲಿ ಇವರ ಬದುಕು ನನ್ನ ಲೆಕ್ಕಾಚಾರಕ್ಕಿಂತ ಭಿನ್ನವಾಗಲು ಹೇಗೆ ತಾನೆ ಸಾಧ್ಯ ? ನಾನು ಹಾಗೆಂದುಕೊಂಡು ಅದೇ ಗುಂಗಿನಲ್ಲಿರುವಾಗ ಒಂದು ದಿನ–ನನ್ನ ಮೊದಲ ವರ್ಷದ ಮಧ್ಯಂತರ ಪರೀಕ್ಷೆಗಾಗಿ ಸಾವಯವ ರಸಾಯನ ಶಾಸ್ತ್ರವನ್ನು ನಾನು ಅಧ್ಯಯನ ಮಾಡುತ್ತಿದ್ದೆ – ಮನೆಗೆ ಹೋದ ಸಂದರ್ಭದಲ್ಲಿ ನನ್ನ ಗೆಳೆಯರಾದ ಎಡಿ ಮತ್ತು ಬಡಿ ಎಂಥ ವಿಪತ್ತಿನಲ್ಲಿ ಸಿಕ್ಕಿಹಾಕಿಕೊಂಡಿದಾರೆ ಎಂಬುದನ್ನು ಓದಿದೆಯಾ ಅಂತ ನಮ್ಮ ಅಪ್ಪ ನನ್ನನ್ನು ಕೇಳಿದರು. ಶಾಂಪೇನ್‌ನಲ್ಲಿ ನಾನು ವೃತ್ತಪತ್ರಿಕೆಯನ್ನು ಅಷ್ಟಾಗಿ ಓದುತ್ತಿರಲಿಲ್ಲ, ಹಾಗಾಗಿ ನೀನು ಏನು ಹೇಳ್ತಿದೀಯ ಅಂತ ನನಗೆ ಗೊತ್ತಾಗುತ್ತಿಲ್ಲ ಎಂದು ತಿರುಗಿ ಅಪ್ಪನಿಗೇ ಹೇಳಿದೆ.

"ಸಿಡ್ನಿ ಗೋಲ್ಡಿನ್ ಯಾವುದೋ ಕಾಳಸಂತೆ ವ್ಯಾಪಾರದ ಸಂಬಂಧ ಹೊಂದಿದಾನೆ ಅಂತ ತೋರುತ್ತೆ" ಎಂದು ಹೇಳಿದ. "ಪರಿಸ್ಥಿತಿ ಗಂಭೀರವಾಗಿಯೇ ಇದೆ."

“ಇದರ ಬಗ್ಗೆ ವೃತ್ತಪತ್ರಿಕೆಯಲ್ಲಿ ಬಹಳ ಬಂದಿದೆಯಾ ಅಪ್ಪ ?”

“ಟ್ರಿಬ್ಯೂನ್ ಮತ್ತು ಸನ್‌ಟೈಮ್ಸ್ ಎರಡರಲ್ಲೂ ಮುಖಪುಟದಲ್ಲಿ ಬಂದಿದೆ” ಅಪ್ಪ ಹೇಳಿದ. “ಜೊತೆಗೆ ಶ್ರೀಮತಿ ಗೋಲ್ಡಿನ್ ಮತ್ತು ನಿನ್ನ ಗೆಳೆಯರಾದ ಬಡಿ ಮತ್ತು ಎಡಿಯ ಭಾವಚಿತ್ರಗಳೂ ಅಚ್ಚಾಗಿವೆ. ಈ ಸಂಜೆ ಟೆಲಿವಿಷನ್ ನ್ಯೂಸ್‌ನಲ್ಲೂ ಅದೇ ಮುಖ್ಯ ಸಮಾಚಾರ.”

ವಿಷಯಾಂತರಿಸಿ ಅಪ್ಪ ಸಾವಯುವ ರಸಾಯನಶಾಸ್ತ್ರದ ಪರೀಕ್ಷೆಗೆ ನನ್ನ ತಯಾರಿ ಚೆನ್ನಾಗಿದೆಯಾ ಅಂತ ವಿಚಾರಿಸುತ್ತಿದ್ದ. ಆದರೆ ನನ್ನ ಮನಸ್ಸು ಮಾತ್ರ ಎಲ್ಲಿಯೋ ಇತ್ತು. ಆ ದಿನದ ಶಿಕಾಗೋ ವೃತ್ತಪತ್ರಿಕೆಗಾಗಿ ತವಕಿಸಿದೆ. ವೃತ್ತಪತ್ರಿಕೆ ನನ್ನ ಕೈಗೆ ಸಿಕ್ಕಾಗ ನಮ್ಮ ಅಪ್ಪ ಹೇಳಿದ್ದಕ್ಕಿಂತ ಯಾವ ರೀತಿಯಲ್ಲೂ ಪರಿಸ್ಥಿತಿ ಕಡಿಮೆ ಇರಲಿಲ್ಲ. ‘ಸನ್‌ಟೈಮ್ಸ್’ ಶೀರ್ಷಿಕೆ ಚೀರುತ್ತಿತ್ತು : “ಸುಪ್ರಸಿದ್ಧ ಅಟಾರ್ನಿ ಮಕ್ಕಳ ಮಾರಾಟಗಾರ”. ಶಿಕಾಗೋ ‘ಟ್ರಿಬ್ಯೂನ್’ ಹೀಗೆಂದಿತು, “ಪ್ರಭಾವೀ ವಕೀಲ ಹಸುಳೆಗಳ ಕಾಳಸಂತೆ ಮಾರಾಟಗಾರ”, ಮತ್ತು ಅದರ ಕೆಳಗೆ, “ಸಿಡ್ನಿ ಗೋಲ್ಡಿನ್, ಮಾಜಿ ಇಲಿನಾಯ್ ಕ್ರೀಡಾಪಟು, ಮಕ್ಕಳ ಮಾರಾಟ ಜಾಲದಲ್ಲಿ ಸಂಪರ್ಕ ಹೊಂದಿದ್ದಾನೆ.” ‘ಸನ್‌ಟೈಮ್ಸ್’ನ ಮೂರನೇ ಪುಟದಲ್ಲಿ ಸಿಡ್ ಮತ್ತು ಜೀನ್‌ಗೋಲ್ಡಿನ್ ಇಬ್ಬರೂ ತಮ್ಮ ಸಂಜೆ ಉಡುಪಿನಲ್ಲಿ ಅಡ್ಲಾಯ್ ಸ್ಟೀವನ್‌ಸನ್‌ಗೋಸ್ಕರ ಏರ್ಪಾಟಾಗಿದ್ದ ನಿಧಿ ಸಂಗ್ರಹಣಾ ಭೋಜನಕೂಟದಲ್ಲಿದ್ದ ಚಿತ್ರವಿತ್ತು. ಅದೇ ಪುಟದ ತಳಭಾಗದಲ್ಲಿ ಗೋಲ್ಡಿನ್ ಹುಡುಗರ ಅಸ್ಪಷ್ಟವಾದ ಭಾವಚಿತ್ರಗಳು ಅಚ್ಚಾಗಿದ್ದವು : ಬಡಿ ತನ್ನ ಅಯೋವಾ ಜೆರ್ಸಿ ತೊಟ್ಟಿದ್ದ, ಎಡಿ ಮಿಶಿಗನ್ ಫುಟ್‌ಬಾಲ್ ಹೆಲ್ಮೆಟ್ ಹಾಕಿಕೊಂಡಿದ್ದ. ‘ಟ್ರಿಬ್ಯೂನ್’ನಲ್ಲಿ ಸಿಡ್‌ಗೋಲ್ಡಿನ್‌ನವೊಬ್ಬನದೇ ಫೋಟೋ. ಅವನು ಶ್ರೀಮಂತಿಕೆಯ ಮೆಟ್ಟಿಲೇರುತ್ತಿರುವುದನ್ನು ಸಂಕೇತಿಸುವ ಚಿತ್ರ ಅದು. ಈ ಭಾವಚಿತ್ರವನ್ನು ನೋಡುತ್ತಾ ನೋಡುತ್ತಾ ನಮ್ಮಪ್ಪ ಆಗಾಗ್ಗೆ ಹೇಳುತ್ತಿದ್ದ ವಾಕ್ಯವೊಂದನ್ನು ನನಗೆ ನಾನೆ ಗೊಣಗಿಕೊಂಡೆ, “ಯಹೂದ್ಯರಿಗೆ ಇದು ಒಳ್ಳೆಯದಲ್ಲ.”

ವೃತ್ತಪತ್ರಿಕೆಗಳ ಕತೆಗಳಿಂದ ನನಗೆ ಅರ್ಥವಾದದ್ದೇನೆಂದರೆ ಸಿಡ್‌ಗೋಲ್ಡಿನ್ ಎಂದಿನಂತೆ ಮಧ್ಯವರ್ತಿಯ ಹಾಗೆ ಕೆಲಸ ಮಾಡಿದ್ದ. ಈ ವ್ಯವಹಾರದಲ್ಲಿ, ಸ್ತ್ರೀರೋಗ ತಜ್ಞ, ಡಾ. ಹವರ್ಡ್ ಪೀಟರ್ಸನ್ ನಿಜವಾದ ಕೇಂದ್ರವ್ಯಕ್ತಿ. ಪೀಟರ್ಸನ್ ಅವಿವಾಹಿತ ಗರ್ಭಿಣಿ ಹುಡುಗಿಯರನ್ನು ಸುರಕ್ಷಿತವಾಗಿ ಇಟ್ಟುಕೊಂಡಿದ್ದು ಅವರ ವಾಸದ ಬಾಡಿಗೆ ಮತ್ತು ಊಟದ ವೆಚ್ಚನ್ನು ಭರಿಸುವುದರ ಜೊತೆಗೆ ಅವರ ಗರ್ಭ ಅಂತ್ಯವಾದಾಗ ಅವರಿಗೆ ಹೆಚ್ಚುವರಿ 3000 ಡಾಲರುಗಳನ್ನು ಕೊಡುವುದಾಗಿ ದಾಖಲಿನಲ್ಲಿ ಒಪ್ಪಿಗೆ ಪಡೆದುಕೊಳ್ಳುತ್ತಿದ್ದ. ಈ ವ್ಯವಹಾರ ಮೊದಲೇ ಕಾನೂನುಬಾಹಿರವಾದ್ದರಿಂದ ಹುಡುಗಿಯರು ತಾವು ಹಡೆಯುವ ಮಕ್ಕಳನ್ನು ವೈದ್ಯನಿಗೆ ಕೊಡುವುದಾಗಿ ಒಪ್ಪುತ್ತಿದ್ದರು. ಕಾನೂನಿನ ದೃಷ್ಟಿಯಿಂದ ಆ ದಿನಗಳಲ್ಲಿ ದತ್ತು ತೆಗೆದುಕೊಳ್ಳುವವರಿಗೆ ಮಕ್ಕಳನ್ನು ಕೊಡುವುದು ತುಂಬಾ ಕಷ್ಟದ ಕೆಲಸವಾಗಿತ್ತು ; ಹಾಗಾಗಿ, ಡಾ.

ಪೀಟರ್ಸನ್ ಅನೇಕ ವಕೀಲರ ಸಹಾಯವನ್ನು ಪಡೆದು ಹೇಗೋ ಈ ದಂಧೆ ಮುಂದು ವರಿಸಿದ. ಈ ರೀತಿಯಾಗಿ ಒಂದು ಮಗುವನ್ನು ದತ್ತು ಪಡೆಯಲು 20,000 ಡಾಲರುಗಳು ವೆಚ್ಚವಾಗುತ್ತಿತ್ತು; ಇದರಲ್ಲಿ ಪೀಟರ್ಸನ್‌ಗೆ 15,000 ಡಾಲರ್‌ಗಳು ಮತ್ತು ಉಳಿದ ಹಣ ವಕೀಲನ ಪಾಲು.

ಸಿಡ್‌ಗೋಲ್ಡಿನ್ ಈ ಕಾನೂನು ಬಾಹಿರವಾದ ದತ್ತು ಸ್ವೀಕಾರದ ವ್ಯವಹಾರ ದಲ್ಲಿ ಸುಮಾರು ಏಳು ಮಕ್ಕಳನ್ನು ಕೊಡಮಾಡಿದ್ದ. ಕಡೆಯ ಮಗುವನ್ನು ಒಬ್ಬ ಪ್ರಮುಖನಾದ ಐರಿಷ್ ರಾಜಕಾರಣಿಗೆ ಕೊಟ್ಟಿದ್ದ; ಒಬ್ಬಳು ಯಹೂದ್ಯ ಮಹಿಳೆ ಯನ್ನು ಆತ ಮದುವೆಯಾಗಿದ್ದ; ಅವರಿಗೆ ಮಕ್ಕಳಾಗುವ ಸಂಭವ ಇರಲಿಲ್ಲ. ಈ ರಾಜಕಾರಣಿಗೆ ಶತ್ರುಗಳಿದ್ದುದ್ದರಿಂದ ದಂಪತಿಗಳು ಒಂದೇ ಧರ್ಮಕ್ಕೆ ಸೇರಿದವರಾಗಿರು ವಾಗ ಸರ್ಕಾರ ಇಂಥ ದಂಪತಿಗಳು ದತ್ತು ತೆಗೆದುಕೊಳ್ಳಲು ಹೇಗೆ ಅನುಮತಿ ನೀಡಿತು ಎಂದು ವೃತ್ತಪತ್ರಿಕೆಗಳಲ್ಲಿ ಕತೆ ಹಬ್ಬಿಸಿದರು. ಹೀಗೆ ಒಂದರಿಂದ ಇನ್ನೊಂದಕ್ಕೆ ದಾರಿ ಯಾಗಿ ಕಡೆಗೆ ಸಿಡ್‌ಗೋಲ್ಡಿನ್ ಈ ವಿಷಜಾಲದಲ್ಲಿ ಸಿಕ್ಕಿರುವುದು ಬೆಳಕಿಗೆ ಬಂದಿತು.

ಸಿಡ್‌ಗೋಲ್ಡಿನ್ ಈ ಕಸುಬಿಗೆ ಇಳಿದದ್ದಾದರೂ ಹೇಗೆ ? ಸುಲಭವಾಗಿ ಹಣ ದಕ್ಕುವ ಸಂದರ್ಭದಲ್ಲಿ ಎಷ್ಟೇ ಶ್ರೀಮಂತರಾದರೂ ಬಾಯಿ ಬಿಡುತ್ತಾರೆ ಎಂದು ಕೊಂಡರೂ ಅವನಿಗೆ ಹಣದ ಅವಶ್ಯಕತೆಯಂತೂ ಇರಲಿಲ್ಲ. ಹಣದ ವಿಚಾರವನ್ನು ಒತ್ತಟ್ಟಿಗೆ ಇಟ್ಟರೂ ಈ ವ್ಯವಹಾರದಲ್ಲಿ ಬಹಳ ಗಣ್ಯ ವ್ಯಕ್ತಿಗಳಿಗೆ ತಾನು ಸಹಾಯ ಮಾಡುತ್ತಿರುವೆ ಎಂಬ ಹೆಮ್ಮೆ ಇದ್ದದ್ದರಿಂದ ಕೂಡ ಅವನು ಮುಂದುವರಿಯಲು ಒಂದು ಕಾರಣವಾಯಿತೆಂದು ತೋರುತ್ತದೆ. ಸಜೀವವಾದ ಒಂದು ಮಗುವನ್ನು ಒಬ್ಬರಿಂದ ಮತ್ತೊಬ್ಬರಿಗೆ ಕೊಡಿಸುವ ಏರ್ಪಾಡಿಗಿಂತ ಘನವಾದ ಏರ್ಪಾಡು ಬೇರೆ ಇರಲು ಸಾಧ್ಯವಿಲ್ಲ. ಪ್ರಾಯಶಃ ಸಿಡ್‌ಗೋಲ್ಡಿನ್ ಈ ರೀತಿಯಾಗಿ ಯೋಚಿಸಿರಲಾರ. ಇದ ಕ್ಕಿಂತ ಸರಳವಾಗಿ ಅವನು ಚಿಂತಿಸಿರಬಹುದು. ಕೆಲವು ದಂಪತಿಗಳಿಗೆ ಮಕ್ಕಳು ಬೇಕಾ ಗಿತ್ತು; ಮಕ್ಕಳನ್ನು ಕೊಡುವವರೂ ಸಿದ್ಧವಿದ್ದರು. ಮಕ್ಕಳನ್ನು ಪಡೆದವರಿಗೆ ಸಂತೋಷವಾಗುತ್ತದೆ; ಹಾಗೆಯೇ, ಈ ಮಕ್ಕಳು ಶ್ರೀಮಂತರ ಮನೆಗಳಿಗೆ–ಅಂದರೆ ಉತ್ತಮವಾದ ವಾತಾವರಣಕ್ಕೆ ಹೋಗುತ್ತಾರೆ. ತಾನು, ಸಿಡ್ನಿಗೋಲ್ಡಿನ್, ಈ ರೀತಿ ಎಲ್ಲ ಏರ್ಪಾಡುಗಳನ್ನೂ ಮಾಡುವವನು. ಅದರಲ್ಲಿ ಸುಲಭವಾಗಿ ಹಣವೂ ಕೂಡ ಇದೆ. ಇದರಲ್ಲಿ ತಪ್ಪೇನು ?

ಸಿಡ್ನಿಗೋಲ್ಡಿನ್‌ನನ್ನು ಕಡೆಯ ಪಕ್ಷ ಹತ್ತು ವರ್ಷವಾದರೂ ಇಲಿನಾಯ್ ವಕೀಲರ ಸಂಘದಿಂದ ವಜಾ ಮಾಡಲು ಸಾಕಷ್ಟು ಕಾರಣಗಳಿದ್ದವು. ಆ ವೇಳೆಗೆ ಅವನು ತನ್ನ ನಲವತ್ತರ ದಶಕದ ಅಂತ್ಯದಲ್ಲಿದ್ದುದರಿಂದ ವಕೀಲನಾಗಿ ಇನ್ನು ಏಳಿಗೆ ಯಾಗುವ ಸಂಭವ ಇರಲಿಲ್ಲ. ಅವನ ಜೊತೆ ಪಾಲುಗಾರರಾಗಿದ್ದ ವಕೀಲರು ತಮ್ಮ ವ್ಯವಹಾರದಿಂದ ಅವನ ಹೆಸರನ್ನು ಹೊಡೆದು ಹಾಕಿದರು. ಅವನ ಶ್ರೀಮಂತ ಕಕ್ಷಿ ಗಾರರು ಅವನಿಂದ ದೂರವಾದರು. ಆತನೇನು ಜೈಲಿಗೆ ಹೋಗಬೇಕಾಗಿರಲಿಲ್ಲ,

ವಿಚಾರಣೆಗೆ ಗುರಿಯಾಗಬೇಕಾಗಿರಲಿಲ್ಲ; ತನ್ನಲ್ಲಿರುವ ಹಣ ಮತ್ತು ಐಶ್ವರ್ಯದಿಂದ ಬದುಕಿಳಿದ ಕಾಲವನ್ನು ಐಷಾರಾಮವಾಗಿ ಕಳೆಯಬಹುದಿತ್ತಾದರೂ ಹೆಜ್ಜೆ ಹೆಜ್ಜೆಗೆ ಎದುರಾಗುವ ಅವಮಾನವನ್ನು ತಾಳಿಕೊಳ್ಳುವುದು ಸುಲಭದ ಸಮಾಚಾರವೇನೂ ಆಗಿರಲಿಲ್ಲ. ನೆರೆಹೊರೆಯುವರು "ಇವನೇ ಮಕ್ಕಳು ಮಾರುವವ" ಅಂತ ಬೆರಳು ತೋರುವಂತಾಯಿತು. ರಾಯಲ್ ಓಕ್ಸ್ ಕಂಟ್ರಿಕ್ಲಬ್‌ನ ವಾರ್ಷಿಕ ಚಂದಾ ಬಾಬ್ತು ಚೆಕ್ ಕಳಿಸಿದಾಗ ಕ್ಲಬ್‌ನವರು ಆರು ತಿಂಗಳಿನಿಂದೀಚೆಗೆ ತಾವು ಹೊಸದಾಗಿ ಜಾರಿಗೆ ತಂದ ಅನುಕೂಲತೆಗಳನ್ನು ಸದಸ್ಯರು ಸಮರ್ಪಕವಾಗಿ ಉಪಯೋಗಿಸಿಕೊಳ್ಳದ ಕಾರಣ ಅಂತಹ ಸದಸ್ಯರ ಚಂದಾ ಹಣವನ್ನು ಕ್ಲಬ್ಬು ಸ್ವೀಕರಿಸುವುದಿಲ್ಲ ಎಂದು ಚೆಕ್ಕು ವಾಪಸ್ಸು ಮಾಡಿಬಿಟ್ಟಿದ್ದರು. ಸಿಡ್ ಮತ್ತು ಜೀನ್‌ಗೋಲ್ಡ್ಸ್ಟಿನ್ ಒಂದು ವರ್ಷದಿಂದ ಆ ಕಡೆ ಮುಖ ಹಾಕಿರಲಿಲ್ಲ. ಇನ್ನೊಂದು ಲಕೋಟೆಯಲ್ಲಿ ಅವರ ಮೂಲ ಸದಸ್ಯತ್ವದ ಶುಲ್ಕ ಕೂಡ ವಾಪಸ್ಸಾಗಿತ್ತು. ನಾನು ಸದ್ಯದಲ್ಲಿ ರಾಯಲ್ ಓಕ್ಸ್‌ನ ಬೋರ್ಡ್ ಆಫ್ ಡೈರೆಕ್ಟರ್‌ನಲ್ಲಿ ಇದ್ದುದರಿಂದ ಗೋಲ್ಡ್ಸ್ಟಿನ್ ಖಾತೆ ತೆಗೆದಾಗ ಈ ಕಾಗದ ನನಗೆ ಸಿಕ್ಕಿತು. ಸಿಡ್‌ಗೋಲ್ಡ್ಸ್ಟಿನ್ ತನ್ನ ಹೆಂಡತಿಗೆ ಈ ಪತ್ರವನ್ನು ತೋರಿಸುವಾಗ ಅವಳ ಪ್ರತಿಕ್ರಿಯೆ ಏನಿರಬಹುದೆಂದು ಊಹಿಸಲು ನನ್ನ ಮನಸ್ಸು ಹಿಂಜರಿಯುತ್ತದೆ.

ಗೋಲ್ಡ್ಸ್ಟಿನ್ ಹುಡುಗರ ಮಟ್ಟಿಗೆ ಹೇಳುವುದಾದರೆ ಅವರು ತಮ್ಮದೇ ಸಮಸ್ಯೆಗಳಲ್ಲಿ ಸಿಕ್ಕಿಹಾಕಿಕೊಂಡರು. ಅಯೋವಾದಲ್ಲಿ ಬಹಳ ಉತ್ತಮವಾಗಿ ಆಡುತ್ತಿದ್ದ ಬಡಿ ಇದ್ದಕ್ಕಿದ್ದಂತೆ ಪರ್ಡ್ಯೂನಲ್ಲಿ ಆಡುತ್ತಿದ್ದ ಪಂದ್ಯವೊಂದರಲ್ಲಿ ಏಕೋ ಏನೋ ಆಯತಪ್ಪಿ ಕಣ್ಣು ಕತ್ತಲಿಟ್ಟಂತಾಯಿತಂತೆ, ಮರುಕ್ಷಣದಲ್ಲಿ ಅವನಿಗೆ ನೆನಪಾದದ್ದು ಸ್ಟ್ರೆಚರ್‌ನ ಮೇಲೆ ವೆಸ್ಟ್ ಲೇಫಟ್‌ನ ಆಸ್ಪತ್ರೆಗೆ ಹೋಗುವ ಹಾದಿ. ಎಡಗಾಲಿನ ಮಂಡಿಚಿಪ್ಪಿಗೆ ತೀವ್ರವಾಗಿ ಪೆಟ್ಟಾಗಿತ್ತು, ಕೀಲು ಮುರಿದಿತ್ತು. ಆ ಸೀಸನ್‌ಮಟ್ಟಿಗೆ ಬಡಿಯ ಆಟ ಕೊನೆಯಾಗಿತ್ತು. ಮತ್ತೆ ತನ್ನ ಜೂನಿಯರ್ ವರ್ಷದಲ್ಲಿ ಆಡಲು ಅವನು ವಾಪಸ್ಸಾದಾಗ ಮಂಡಿಗೆಲ್ಲಾ ಟೇಪು ಮತ್ತು ಬ್ಯಾಂಡೇಜ್ ಕಟ್ಟಿಕೊಂಡು ವಿಚಿತ್ರವಾಗಿ ಓಡಾಡುತ್ತಿದ್ದುದು ಕಣ್ಣಿಗೆ ಬಿದ್ದಿತು. ಅವನಲ್ಲಿ ಮೊದಲಿನ ಮಿಂಚು ಇರಲಿಲ್ಲ. ಆ ಮಿಂಚಿನಂಥ ಚಲನೆಯ ಆಧಾರದ ಮೇಲೆ ಭದ್ರವಾಗಿದ್ದ ಅವನ ಆತ್ಮವಿಶ್ವಾಸ ನಾಶವಾಗಿತ್ತು. ಸ್ಟಾರ್ಟರ್ ಆಗಿ ಈಗ ಅವನಿಗೆ ಸ್ಥಾನ ಸಿಕ್ಕುವಂತಿರಲಿಲ್ಲ. ಮತ್ತೆ ತನ್ನಿಂದ ಉತ್ತಮ ಮಟ್ಟದ ಆಟ ಪ್ರದರ್ಶಿಸಲು ಸಾಧ್ಯವಿಲ್ಲ ಎಂದು ಅವನಿಗೆ ಖಚಿತವಾಗಿದ್ದದ್ದರಿಂದ ಸೀನಿಯರ್ ವರ್ಷಕ್ಕೆ ಆಡಲು ಅವನು ಅಯೋವಾ ವಿಶ್ವವಿದ್ಯಾನಿಲಯಕ್ಕೆ ವಾಪಸ್ಸಾಗಲೇ ಇಲ್ಲ. ಲಯೊಲಾ ವಿಶ್ವವಿದ್ಯಾನಿಲಯ ಮತ್ತು ಲಯೊಲಾ ಲಾ ಸ್ಕೂಲಿನ ವ್ಯಾಸಂಗದ ನಂತರ ಅತ ಶಿಕಾಗೋಕ್ಕೆ ವಾಪಸ್ಸಾದ.

ಅಯೋವಾದಿಂದ ಬಂದಾಗ ಬಡಿ ತನ್ನ ಕಾನೂನು ಅಧ್ಯಯನದ ಕೊನೆಯ ವರ್ಷದವರೆಗೆ ಮನೆಯಲ್ಲೇ ಉಳಿದ. ತರುವಾಯದಲ್ಲಿ ಗಾಲ್ಫ್ ಆಡಲು ಶುರು ಮಾಡಿದ; ಎರಡೇ ವರ್ಷದಲ್ಲಿ ಉತ್ತಮ ಆಟಗಾರನ ಸ್ಥಾನ ಗಿಟ್ಟಿಸಿಕೊಂಡ.

ಸಾರ್ವಜನಿಕ ಬಯಲಿನಲ್ಲಿ ಅವನು ಮತ್ತು ಸಿಡ್ ಗೋಲ್ಡಿನ್ ಗಾಲ್ಫ್ ಆಡುತ್ತಿದ್ದರು. ಕೆಲವು ವರ್ಷಗಳ ನಂತರ, ತಮ್ಮ ವಿರುದ್ಧದ ಅಪನಿಂದೆ ಜನರ ಮನಸ್ಸಿನಲ್ಲಿ ಸ್ವಲ್ಪ ಮಸುಕಾಗತೊಡಗಿದಾಗ ಟ್ವಿನ್ ಆರ್ಚರ್ಡ್ಸ್ ಎಂಬ ಇನ್ನೊಂದು ಕಂಟ್ರಿ ಕ್ಲಬ್‌ಗೆ ಸೇರಿಕೊಂಡರು. ಅಲ್ಲಿನ ವೃತ್ತಿಪರ ಆಟಗಾರನೊಬ್ಬ ಸಿಡ್ ಗೋಲ್ಡಿನ್‌ಗೆ ಹೇಳಿದ, ಬಡಿ ನಿಜವಾಗಿಯೂ ಗಾಲ್ಫ್ ಆಟಕ್ಕಾಗಿ ಹೆಚ್ಚು ಸಮಯ ವಿನಿಯೋಗಿಸಿದರೆ ಅವನೊಬ್ಬ ಉತ್ತಮ ಆಟಗಾರನಾಗುವನೆಂದು. ತನ್ನ ತಂದೆಗೊದಗಿದ್ದ ಅಪಖ್ಯಾತಿಯಿಂದ ಬಡಿ ನಿಜವಾಗಿಯೂ ಮನನೊಂದಿದ್ದನೇ ಎಂದು ತಿಳಿಯುವುದು ಕಷ್ಟವಾಗಿತ್ತು.

ಎಡಿ ಗೋಲ್ಡಿನ್‌ನ ವಿಷಯವಾಗಿ ಹೇಳುವುದಾದರೆ, ಅವನು ಮಿಶಿಗನ್‌ನಲ್ಲಿ ಮುಂದುವರಿದನಾದರೂ ಫುಟ್‌ಬಾಲ್ ತಂಡದಿಂದ ಹೊರಗುಳಿದಿದ್ದ; ಆ ಆಟ ತನ್ನನ್ನೀಗ ಆಕರ್ಷಿಸುತ್ತಿಲ್ಲ ಎಂಬ ಒಂದೇ ಒಂದು ಕಾರಣವನ್ನು ಬಿಟ್ಟು ಬೇರೇನೂ ಸಬೂಬು ನೀಡಲಿಲ್ಲ. ತನ್ನ ಓದಿನಲ್ಲಿ ಅವನು ಹೆಚ್ಚು ಹೆಚ್ಚು ತೊಡಗಿಕೊಂಡಿರುವುದಾಗಿಯೂ ನನಗೆ ತಿಳಿದು ಬಂತು. ಪ್ರೌಢಶಾಲೆಯಲ್ಲಿರುವಾಗಲೇ ಎಡಿ ಯಾವಾಗಲೂ ಬಡಿಗಿಂತ ಉತ್ತಮನಾದ ವಿದ್ಯಾರ್ಥಿ. ಅಂದ ಮೇಲೆ, ಅವನೇನು ಅಂಥ ಅಸಾಧಾರಣ ವಿದ್ಯಾರ್ಥಿಯೂ ಆಗಿರಲಿಲ್ಲ; ಆದರೆ ಎಡಿ ಮತ್ತು ಬಡಿ ಗೋಲ್ಡಿನ್‌ರ ಕ್ರೀಡಾ ಪಟುತ್ವದ ಮುಂದೆ ಅವರ ಉಳಿದ ಸಾಮರ್ಥ್ಯಗಳು ಗೌಣವಾಗುತ್ತಿದ್ದವು. ಇಷ್ಟಕ್ಕೂ ಈಗ ಎಡಿ ವ್ಯವಹಾರವನ್ನು ಬಿಟ್ಟು ತತ್ವಶಾಸ್ತ್ರವನ್ನು ಮುಖ್ಯ ವಿಷಯವಾಗಿ ಅಭ್ಯಾಸ ಮಾಡುತ್ತಿರುವ ವಿದ್ಯಾರ್ಥಿ.

ನಮ್ಮ ಜೂನಿಯರ್ ಮತ್ತು ಸೀನಿಯರ್ ವರ್ಷದ ಮಧ್ಯಭಾಗದ ಬೇಸಗೆಯಲ್ಲಿ ಡೆಪ್ರೋನ್ ಅವೆನ್ಯೂದಲ್ಲಿ ಎಡಿಯನ್ನು ನಾನು ಕಂಡಾಗ ಅವನೇ ನನ್ನನ್ನು ಮೊದಲು ಮಾತನಾಡಿಸಿದುದರಿಂದ ಸರಿಹೋಯ್ತು, ಇಲ್ಲದೇ ಹೋಗಿದ್ದರೆ ನನ್ನಿಂದ ಅವನನ್ನು ಪತ್ತೆಹಚ್ಚಲಾಗುತ್ತಿರಲಿಲ್ಲವೊ ಏನೋ! ಅವನ ಕಪ್ಪು ಬಣ್ಣದ ಗುಂಗುರು ಕೂದಲು—ಅದನ್ನವನು ಮೊದಲು ಉದ್ದ ಬೆಳೆಯಲು ಬಿಡುತ್ತಿರಲಿಲ್ಲ—ಈಗ ಎದ್ವಾತದ್ವಾ ಬೆಳೆದಿದ್ದು ಬಾಚಣಿಗೆ ಕಂಡಿರಲಿಲ್ಲ. ತುಂಬಾ ನಾಜೂಕಾಗಿ ಉಡುಗೆ ತೊಡುತ್ತಿದ್ದವನು ಈಗ ಬಟ್ಟೆಯ ಬಗ್ಗೆ ಹೆಚ್ಚು ಗಮನ ಕೊಟ್ಟಿರುವಂತೆ ತೋರಲಿಲ್ಲ. ಫ್ಲಾನಲ್ ಅಂಗಿ ಇಸ್ತ್ರಿ ಕಂಡಿರಲಿಲ್ಲ, ಲೀವಿಸ್ ಶರಾಯಿ ಕೊಳಕಾಗಿತ್ತು, ಫ್ರೈಬೂಟುಗಳಿಗೆ ಮಣ್ಣು ಮೆತ್ತಿತ್ತು. ಸದ್ಯಕ್ಕಂತೂ ಅವನೊಡನೆ ತೆಳ್ಳಗಿನ ತೀರಾ ಸಾಧಾರಣವಾದ ಹುಡುಗಿಯೊಂದು ಜೋತುಬಿದ್ದಿತ್ತು, ಅದನ್ನವನು "ರಬ್" ಅಂತ ಪರಿಚಯ ಮಾಡಿಕೊಟ್ಟ. ಅವಳು ನಾಚಿಕೆಯಿಂದ ನನ್ನನ್ನು ಭೇಟಿಯಾದದ್ದು ಸಂತೋಷವೆಂದು ಹೇಳಿದ ಧಾಟಿಯಲ್ಲಿ ಅಪಲೇಚಿಯನ್ ಉಚ್ಚಾರಣೆ ಗೋಚರಿಸಿತು. ಗ್ರೀಕರಿಂದ ನಡೆಸಲ್ಪಡುತ್ತಿದ್ದ ಕೊಫೀಲ್ಡ್ ಎಂಬ ರೆಸ್ಟೋರೆಂಟಿಗೆ ಮೂವರೂ ಹೋದೆವು.

ಅವರ ತಂದೆತಾಯಿಯರ ಬಗ್ಗೆ ಕೇಳಿದಾಗ "ನನ್ನ ತಾಯಿ ಕ್ಷೇಮವಾಗಿದ್ದಾಳೆ", ಎಂದು ಎಡಿ ಹೇಳಿದ, "ನನ್ನ ಅಪ್ಪ ಮಾತ್ರ ಎಂದಿನಂತೆ ಮಾಮೂಲಿ ಮರ್ಖ."

"ನಿಮ್ಮ ತಂದೆಯ ಸಮಸ್ಯೆ ಏನು ?" ಎಂದು ಮತ್ತೆ ಕೇಳಿದೆ.

"ಸಮಸ್ಯೆ ದೊಡ್ಡದೇನೂ ಅಲ್ಲ" ಎಡಿ ಹೇಳಿದ. "ಒಂದೇನೆಂದರೆ, ಅವನೊಬ್ಬ ಮಹಾ ಮೋಸಗಾರ, ಸುಳ್ಳುಗಾರ."

"ಸ್ವಲ್ಪ ವರ್ಷಗಳ ಕೆಳಗೆ ಸಿಕ್ಕಿಹಾಕೊಂಡಿದ್ರಲ್ಲಾ—ಆ ತಾಪತ್ರಯದ ಬಗ್ಗೆ ಹೇಳ್ತಿದೀಯಾ ?"

"ಅದು ಕೇವಲ ಮಂಜುಗಡ್ಡೆಯ ತುದಿಯಷ್ಟೆ" ಅಂದ. "ನಾವು ಬದುಕ್ತಾ ಇರೋ ಕ್ರಮ, ನಾನು ಮತ್ತು ಬಡಿ ಬೆಳೆದುಬಂದ ರೀತಿ ಎಲ್ಲ. ಎಲ್ಲ ಕೊಳೆತು ನಾರು ವಂಥದು. ತಮಾಷೆ ಅಂದರೆ ನಮ್ಮಪ್ಪನಿಗೆ ಈ ಕೊಳೆಯ ಗಾತ್ರ ಎಷ್ಟು ಅಂತ ಅರಿವಾಗೇ ಇಲ್ಲ. ಎಲ್ಲಾ ಅನೀತಿವಂತರ ಹಾಗೆ ಅವನಿಗೆ ನಮ್ಮ ಬದುಕಿನ ನೀಚತನ ಸ್ವಲ್ಪವೂ ಅಸಹ್ಯವಾಗಿ ಕಾಣ್ತಾಯಿಲ್ಲ."

ಎಡಿ ಮಾತನಾಡುತ್ತಿದ್ದ ವಿಷಯದ ಬಗ್ಗೆ ಅವನ ಗೆಳತಿ ರೆಬ್‌ಗೆ ಕೊಂಚವೂ ತಿಳಿಯಲಿಲ್ಲ. ಅವಳು ತನ್ನ ತೋಳಿನ ಮೇಲ್ಭಾಗದಲ್ಲಿ ಒಂದು ಪುಟ್ಟ ಹೃದಯ ದಾಕಾರದ ಹಚ್ಚೆ ಹುಯ್ಸಿಕೊಂಡಿದ್ದುದು ನನಗೆ ಕಂಡಿತು. ಬೂದು ಬಣ್ಣದ ಪುಟ್ಟ ಪುಟ್ಟ ಹಲ್ಲುಗಳಿಂದ ತುಂಬಿದ್ದ ಬಾಯಿಗೆ ಕೊಳವೆಯ ಮೂಲಕ ಕೋಕ್ ಹಾಯಿಸು ವುದರಲ್ಲಿ ಮಗ್ನಳಾಗಿದ್ದ ಅವಳು ಏನೂ ಮಾತನಾಡಲಿಲ್ಲ. ಎಡಿ ಸಿಡ್ ಮತ್ತು ಜೇನ್ ಗೋಲ್ಡ್ವಿನ್‌ಗೆ ಇವಳನ್ನು ತೋರಿಸಲು ಮನೆಗೆ ಕರೆದೊಯ್ದಿರುವಂತೆ ಕಂಡಿತು—ಇದ ರರ್ಥ ಇನ್ನು ಮೇಲೆ ಬಹುಮಾನಗಳನ್ನಿಟ್ಟಿರುವ ಗಾಜಿನ ಕೇಸಿಗೆ ಹೊಸದಾಗಿ ಯಾವ ಟ್ರೋಫಿಗಳೂ ಸೇರುವುದಿಲ್ಲ ಎಂಬುದರ ಸ್ಪಷ್ಟ ಹೇಳಿಕೆ ಇದಾಗಿತ್ತು.

ಒಬ್ಬ ಹಳೆಯ ಸ್ನೇಹಿತ ತನ್ನ ತಂದೆಯನ್ನೇ ಹೀನಾಯವಾಗಿ ಬೈಯುತ್ತಾ ಕುಳಿತರೆ ಏನು ತಾನೆ ಮಾಡಲು ಸಾಧ್ಯ ? ಸಿಡ್ ಗೋಲ್ಡ್ವಿನ್ ನನ್ನನ್ನು ಯಾವಾಗಲೂ ಚೆನ್ನಾಗೇ ನಡೆಸಿಕೊಂಡ ಅಂತ ನಾನು ಏನೇನೊ ಹೇಳಲು ಪ್ರಯತ್ನಿಸಿದೆ, ಆದರೆ ಅದ ರಿಂದ ಏನೂ ಪ್ರಯೋಜನವಾಗುವ ಹಾಗಿರಲಿಲ್ಲ. ಅವನ ತಂದೆಯ ವಕಾಲತ್ತು ವಹಿಸಿ ಆಡುವ ಮಾತುಗಳಿಗೆ ಕಿವಿ ಕೊಡಬಾರದೆಂದು ಎಡಿ ನಿರ್ಧರಿಸಿದಂತಿತ್ತು. ತನ್ನ ಕೋಪಕ್ಕೆ ಸರಿಯಾದ ಆಧಾರವಿದೆ ಎಂದು ಅವನು ನಂಬಿದ್ದದ್ದು ನನ್ನ ಗಮನಕ್ಕೆ ಬಂತು. ಈ ಸಾತ್ವಿಕ ಉದ್ವಿಗ್ನತೆ ಬಲಿತು ಹೆಮ್ಮರವಾಗಿ ಇಪ್ಪತ್ತೈದು ಸಂವತ್ಸರ ಗಳಾದಾಗಲೂ ಎಡಿ ಅಷ್ಟೇ ಕಟುವಾಗಿ ತನ್ನ ತಂದೆಯನ್ನು ದ್ವೇಷಿಸುತ್ತಿದ್ದ.

1961ರ ಬೇಸಗೆಯಲ್ಲಿ ನಾವು ಪದವೀಧರರಾದೆವು ; ಶಿಶಿರದಲ್ಲಿ ನಾನು ಶಿಕಾಗೋದ ಇಲಿನಾಯ್ ವಿಶ್ವವಿದ್ಯಾಲಯದ ಮೆಡಿಕಲ್ ಸ್ಕೂಲು ಸೇರಿದೆ. ಬಡಿ ಲಯೋಲಾದ ಕಾನೂನು ಶಾಲೆ ಸೇರಿದ : ಶಾಂತಿ ಸೇನೆಯ ಮೊದಲನೆಯ ಸುತ್ತಿನಲ್ಲೇ ಅರ್ಹತೆ ಪಡೆದ ಎಡಿ ಮಧ್ಯ ಆಫ್ರಿಕಾದ ಗ್ರಾಮಾಂತರ ಪ್ರದೇಶದ ಜನರಿಗೆ ಮನೆ ಕಟ್ಟುವ ಆರಂಭಿಕ ತಂತ್ರವನ್ನು ಹೇಳಿಕೊಡಲು ಹೊರಟುಹೋದ. ಆಫ್ರಿಕಾದ ಅಸಾಧ್ಯವಾದ ಸೆಕೆ ಮತ್ತು ಕೀಟಗಳ ಹಾವಳಿಗೆ ಅಂಜದೆ ಹೆಚ್ಚು ಹೆಚ್ಚು ಇಷ್ಟಪಡ

ತೊಡಗಿದ್ದ ; ಶಾಂತಿ ಪಡೆಯು ತನ್ನ ಕೆಲಸವನ್ನು ಮುಗಿಸಿ ವಾಪಸ್ಸಾಗುವ ಸಮಯಕ್ಕೆ ತಾನು ಆಫ್ರಿಕಾದಲ್ಲೇ ಉಳಿದುಕೊಂಡಿದ್ದ. ಓಗೊ ನದಿಯ ದಟ್ಟ ಮರಗಳ ದಂಡೆಯಲ್ಲಿ ನಿರ್ಮಾಣವಾಗಿದ್ದ ಆಸ್ಪತ್ರೆಯಲ್ಲಿ ಆಲ್ಬರ್ಟ್ ಶ್ವೀಟ್ಜರ್‌ನನ್ನು ಭೇಟಿಯಾದ ; ಅಲ್ಲಿಯೇ ಉಳಿದುಬಿಡುವ ಪ್ರಯತ್ನ ಅವನದಾಗಿತ್ತು. ಆಲ್ಬರ್ಟ್ ಶ್ವೀಟ್ಜರ್‌ನನ್ನು ನೇರವಾಗಿ ಎಡಿ ಭೇಟಿಮಾಡುವುದಕ್ಕಾಯಿತಾದರೂ ಕೆಲಸವಾವುದೂ ಸಿಕ್ಕಲಿಲ್ಲ. ತರುವಾಯದಲ್ಲಿ ಡಾ. ಶ್ವೀಟ್ಜರ್ ಹೇಗಿದ್ದ ಅಂತ ಕೇಳಿದ್ದಕ್ಕೆ ಎಡಿ ಅವನೊಬ್ಬ ಮಹಾ ದಡ್ಡ ಅಂತ ಹೇಳಿದ್ದ. ಅಂದ ಮೇಲೆ, ಆಲ್ಬರ್ಟ್ ಶ್ವೀಟ್ಜರ್ ಮತ್ತು ಸಿಡ್ನಿ ಗೋಲ್ಡಿನ್‌ರ ನಡುವೆ ಉಭಯಸಾಮಾನ್ಯವಾದ ಅಂಶ ಒಂದು ಇದ್ದೇ ಇತ್ತು ಅಂದ ಹಾಗಾಯಿತು.

ಆಫ್ರಿಕಾದಿಂದ ಬಂದ ಮೇಲೆ ತತ್ವಶಾಸ್ತ್ರದಲ್ಲಿ ಡಾಕ್ಟರೇಟ್ ಮಾಡಲು ಎಡಿ ಆ್ಯನ್‌ಆರ್ಬರ್‌ಗೆ ಹೋದ. ಆ ಪದವಿಯನ್ನು ಪಡೆಯಲು ಅವನಿಗೆ ಹನ್ನೊಂದು ವರ್ಷ ಹಿಡಿಯಿತು. ಈ ಮಧ್ಯೆ 1960ರ ದಶಕ—ಆ್ಯನ್ ಆರ್ಬರ್ ಕುದಿಯುತ್ತಿದ್ದ ಕಾಲ. ಹತ್ತು ಹನ್ನೆರಡು ವರ್ಷದವನಾಗಿದ್ದಾಗ ಭಯ ಅಂದರೇನು ಅಂತ ಅರಿಯದ ಧೈರ್ಯಶಾಲಿ ಓಟಗಾರನಿಗೆ ಇಪ್ಪತ್ತೈದರ ಹರಯದಲ್ಲಿ ದಿಗಿಲುಂಟಾಗುವ ಸಂಭವ ಇರಲಿಲ್ಲ. ಅವನಾಗಲೇ ಒಬ್ಬ ಎಸ್ ಡಿ ಎಸ್ (ಸ್ಟೂಡೆಂಟ್ಸ್ ಫಾರ್ ಡೆಮಾಕ್ರಟಿಕ್ ಸೊಸೈಟಿ) ಆಗಿದ್ದ. ಸೈನ್ಯಕ್ಕೆ ಸೇರುವುದನ್ನು ನಿರಾಕರಿಸಿ ದೇಶ ಬಿಟ್ಟು ಹೋಗುತ್ತಿರುವವರ ಬೆಂಬಲಕ್ಕಾಗಿ ಅಮೆರಿಕಾದಿಂದ ಸ್ವೀಡನ್ನಿಗೆ ಹೋಗಲು ತಯಾರಿ ನಡೆಸಿದ್ದನೆಂದು ವದಂತಿ ಹರಡಿತ್ತು. ಎಡಿಯನ್ನು ನಾನು ಭೇಟಿಯಾಗಲಿಲ್ಲವಾದರೂ, ಸದ್ಯ ವಿಷಯ ಆ ಹಂತಕ್ಕೆ ಬರಲಿಲ್ಲವೆಂದು ತಿಳಿದು ಅವನ ಸ್ನೇಹಿತನಾಗಿ ನನಗೆ ಸಂತೋಷವಾಗಿತ್ತು.

"ನನ್ನ ಮಗ ಎಡಿ", ಎಲ್ಮೈಟ್‌ನ ಪ್ಲಾಜಾ ಡಲ್ ಲ್ಯಾಗೋದ ನನ್ನ ಕಛೇರಿಯಲ್ಲಿ ಕುಳಿತು ಸಿಡಿ ಗೋಲ್ಡಿನ್ ಮಾತನಾಡುತ್ತಿದ್ದ, "ತನ್ನ ಅಪ್ಪನನ್ನು ದ್ವೇಷಿಸುತ್ತಾ ಇಡೀ ಜೀವಮಾನವನ್ನು ನಷ್ಟ ಮಾಡಿಕೊಂಡ."

ಪಿತ್ಥಕೋಶದ ಶಸ್ತ್ರ ಚಿಕಿತ್ಸೆ ಆಗಬೇಕು ಎಂದು ನಾನು ಆಗ ತಾನೆ ತಿಳಿಸಿದ್ದರಿಂದಲೋ ಏನೋ—ಅದೇನು ಅಂಥ ಆತಂಕಪಡಬೇಕಾದ ವಿಷಯವಾಗಿಲ್ಲದಿದ್ದರೂ ಸ್ವಲ್ಪ ಮನಸ್ಸಿಗೆ ದುಗುಡವುಂಟುಮಾಡುವಂತಹುದಾಗಿತ್ತು—ಸಿಡ್ ಗೋಲ್ಡಿನ್ ಬಹಿರಂಗವಾಗಿ ಖಿನ್ನನಾಗಿದ್ದ. ಎರಡನೆಯ ಸಲದ ಸಲಹೆಗಾಗಿ ಆತ ನನ್ನ ಬಳಿ ಬಂದಿದ್ದದು ; ಇತ್ತೀಚೆಗೆ ಎಲ್ಲ ವಿಮಾ ಕಂಪನಿಯವರು ಯಾವುದೇ ದೊಡ್ಡ ಶಸ್ತ್ರ ಚಿಕಿತ್ಸೆಗೆ ಹಣ ಮಂಜೂರು ಮಾಡುವ ಮೊದಲು ಈ ಎರಡನೆಯ ಸಲಹೆಯನ್ನು ಕಡ್ಡಾಯ ಮಾಡಿದ್ದಾರೆ. ಗೋಲ್ಡಿನ್‌ರು ಇತ್ತೀಚೆಗೆ ಬಂದ ವಿಸಟ್ಕಾದ ಮನೆಗೆ ನನ್ನ ಮನೆ ಹತ್ತಿರವಾಗಿದ್ದದ್ದರಿಂದ ಅವರ ವೈದ್ಯ ಹೋವಿ ಲೆವಿನ್—ಅವನೊಡನೆ ನಾನು ವೈದ್ಯಕೀಯ ಕಲಿಯುತ್ತಿದ್ದುದು ಮತ್ತು ಈಗಲೂ ನಾವು ಹೆಚ್ಚು ಹೆಚ್ಚು ಸಾಮಾಜಿಕವಾಗಿ ಬೆರೆಯುತ್ತಿದ್ದೆವು—ನನ್ನ ಹೆಸರು ರೆಕಮೆಂಡ್ ಮಾಡಿದ್ದ. (ಅರವತ್ತು

ತುಂಬುತ್ತಲೇ ಸಿಡ್ ಮತ್ತು ಜೇನ್ ಗೋಲ್ಡಿನ್ ರ್ಯಾಂಚೋ ಮಿರಾಜ್‌ನಲ್ಲಿ ಕೊಂಡುಕೊಂಡಿದ್ದ ಫ್ಲಾಟ್‌ನಲ್ಲಿ ಚಳಿಗಾಲವನ್ನು ಕಳೆಯಲು ಶುರು ಮಾಡಿದ್ದರು.) ನನ್ನನ್ನು ಆತ ಪಕ್ಕನೆ ಗುರುತು ಹಿಡಿಯಲಿಲ್ಲವಾಗಿ ನನಗೆ ಕೊಂಚ ನಿರಾಶೆಯಾಯಿತಾದರೂ ಆಶ್ಚರ್ಯವಾಗಲಿಲ್ಲ; ನಂತರ ಚಿಕ್ಕಂದಿನಲ್ಲಿ ಹೈಸ್ಕೂಲು ಓದುವಾಗ ಅವರ ಮಕ್ಕಳೊಡನೆ ಓಡಾಡಿಕೊಂಡಿದ್ದ ಅದೇ ಫಿಲಿಪ್ ಹರ್ಷ ನಾನು ಎಂದು ಆತನಿಗೆ ತಿಳಿಸಿದೆ. ಚಲನಚಿತ್ರ ತಾರೆಯರನ್ನು ಮತ್ತು ವೃತ್ತಿಪರ ಓಟಗಾರರನ್ನು ಕಕ್ಷಿಗಾರರನ್ನಾಗಿ ಹೊಂದಿದ್ದು, ಒಂದು ಕಾಲದಲ್ಲಿ ತಾನೇ ಸ್ವಯಂ ಶ್ರೇಷ್ಠಮಟ್ಟದ ಓಟಗಾರನಾಗಿದ್ದ ವ್ಯಕ್ತಿಯೊಬ್ಬ ಇಪ್ಪತ್ತೈದು ವರ್ಷಗಳ ಹಿಂದೆ ಹದಿನಾರು ವರ್ಷದವನಾಗಿದ್ದ ಒಬ್ಬ ಸಾಮಾನ್ಯ ಹುಡುಗನ ನೆನಪಿಟ್ಟುಕೊಳ್ಳದೇ ಹೋದರೆ ಅದೇನು ವಿಶೇಷ ಸಂಗತಿಯಲ್ಲ.

ನನ್ನ ಮಟ್ಟಿಗಾದರೆ, ಸಿಡ್ ಗೋಲ್ಡಿನ್‌ನನ್ನು ಎಲ್ಲಿಯಾದರೂ ಬೇಕಾದರೆ ಪತ್ತೆ ಮಾಡಿಬಿಡುತ್ತಿದ್ದೆ. ಶ್ರೀಮಂತಿಕೆಯ ಕುರುಹುಗಳು ಅವನಲ್ಲಿ ಇನ್ನೂ ಸ್ಪಷ್ಟವಾಗಿದ್ದವು. ದುಬಾರಿ ದಿರಿಸುಗಳನ್ನು ಹಗುರವಾಗಿ ತೊಟ್ಟುಕೊಂಡಿದ್ದ ಸಿಡ್ ಗೋಲ್ಡಿನ್‌ನಲ್ಲಿ ತನ್ನ ದೈನಂದಿನ ಜವಾಬ್ದಾರಿಗಳನ್ನು ಬಾಡಿಗೆ ಮಂದಿ ನಿಭಾಯಿಸಿ ಉಳಿದದ್ದೆಲ್ಲ ನೇರ್ಪಾಗಿ ನಡೆಯುತ್ತಿರುವ ಆಸಾಮಿಯಲ್ಲಿರುವ ನಿರುಮ್ಮಳ ಅವನಲ್ಲಿ ಎದ್ದು ಕಾಣುತ್ತಿತ್ತು. ದಟ್ಟ ಕಪ್ಪಿನ ಅವನ ರೇಶಿಮೆ ಕೂದಲು ತನ್ನ ಮೊದಲ ಹೊಳಪನ್ನು ಕಳೆದುಕೊಂಡಿರಲಿಲ್ಲವಾದರೂ ಹಣೆಯ ಅಕ್ಕಪಕ್ಕದಲ್ಲಿ ಮಾತ್ರ ಸ್ವಲ್ಪ ನೆರೆ ಬರುವ ಸೂಚನೆ ಇತ್ತು. ಪಿತ್ತಕೋಶದ ಸಮಸ್ಯೆಯನ್ನು ಬಿಟ್ಟರೆ ಆರೋಗ್ಯಕ್ಕೆ ಅಂಥ ಹಾನಿ ಇರಲಿಲ್ಲ. ಅರವತ್ತನಾಲ್ಕನೇ ವಯಸ್ಸಿನಲ್ಲಿ ಅವನ ಶರೀರದ ತೂಕ ಕೊಂಚವೂ ಹೆಚ್ಚಾಗಿರಲಿಲ್ಲ. ಹೃದಯದ ಕೆಲಸ ಸಮರ್ಪಕವಾಗಿತ್ತು : ಮಾಂಸಖಂಡಗಳ ಬಿಗಿ ಕಡಿಮೆಯಾಗಿರಲಿಲ್ಲ.

"ಎಡಿ ನಿಜವಾಗಿಯೂ ಯಾವುದರಲ್ಲೂ ತನ್ನನ್ನು ತಾನು ತೊಡಗಿಸಿಕೊಳ್ಳಲಿಲ್ಲ", ಅವನು ಮುಂದುವರಿಸಿದ. "ಅವನು ಪಿ ಎಚ್ ಡಿ ಮುಗಿಸುವುದರೊಳಗೆ ಮುವತ್ತೈದರ ಗಡಿಮುಟ್ಟಿದ್ದ. ಅವನ ತಾಯಿ ಮತ್ತು ನನಗೆ ಅನ್ನಿಸುವ ಪ್ರಕಾರ ಅವನ ಮೂರ್ಖ ರಾಜಕಾರಣದ ಸಲುವಾಗಿ ಅವನ ಸಮಯ ಮತ್ತು ಶಕ್ತಿಯೆಲ್ಲಾ ವ್ಯಯವಾಯಿತು. ಒಂದು ವರ್ಷ ನ್ಯೂಯಾರ್ಕಿನ ಜೆನಿಸಿಯೋದಲ್ಲಿ ಅವನು ಅಧ್ಯಾಪನ ಮಾಡುತ್ತಿದ್ದರೆ ಮರುವರ್ಷ ಕ್ಯಾಲಿಫೋರ್ನಿಯಾದ ಅರ್ವಿನ್‌ನಲ್ಲಿರುತ್ತಾನೆ. ಇನ್ನೊಂದು ವರ್ಷದಲ್ಲಿ ಟೈವಾನ್‌ನಿಂದ ಅವನ ಸೋದರನಿಗೆ ಕಾರ್ಡ್ ಕಳಿಸುತ್ತಾನೆ. ಅವನು ಬದುಕುತ್ತಿರುವುದನ್ನು ಗಮನಿಸಿದರೆ ಮೈನರ್–ಲೀಗ್ ಬೇಸ್‌ಬಾಲ್ ಆಡಿಕೊಂಡಿದ್ದರೇನೆ ಚೆನ್ನಾಗಿತ್ತು ಅನ್ನಿಸುತ್ತೆ. ಮದುವೆ ಮಾಡಿಕೊಳ್ಳಲಿಲ್ಲ, ಮುಂದೆಯೂ ಅವನು ಮಾಡಿಕೊಳ್ಳುವುದಿಲ್ಲವೆಂದು ನನ್ನ ಊಹೆ."

"ಎಡಿಯಿಂದ ನಮಗೇನು ನೇರವಾಗಿ ಪತ್ರವಗೈರೆ ಬರುವುದಿಲ್ಲ", ಸಿಡ್ ಗೋಲ್ಡಿನ್ ಹೇಳಿದ, "ಅವನ ಸೋದರನಿಂದ ನಾವು ಅವನ ಬಗ್ಗೆ ತಿಳಿದುಕೊಂಡಿರುವುದು ; ಅವನನ್ನೂ ಭೇಟಿಯಾಗುವುದು ವರ್ಷಕ್ಕೆ ಒಮ್ಮೆ ಅಥವಾ ಎರಡು ಬಾರಿ,

ಅಷ್ಟೆ. ಕಡೆಯ ಬಾರಿ ನಾನು ಮತ್ತು ಎಡಿ ಭೇಟಿಯಾಗಿದ್ದಾಗ–ಈಗ್ಗೆ ಇಪ್ಪತ್ತು ವರ್ಷಗಳೇ ಆಗಿವೆ–ನನ್ನನ್ನ ಹೀನಾಯವಾಗಿ ಅಂದ. ನನ್ನನ್ನ ಮೋಸಗಾರ ಮತ್ತು ಸುಳ್ಳುಗಾರ ಅಂತ ಕರೆದ. ನಾನು ಇದುವರೆಗೆ ಕಟ್ಟಿರುವುದೆಲ್ಲ ದಗ ಮತ್ತು ವಂಚನೆಯಿಂದ ಕೂಡಿದುದು ಎಂದ. ನನ್ನ ಭ್ರಷ್ಟಾಚಾರದಲ್ಲಿ ಐಶಾರಾಮದಲ್ಲಿ ಬದುಕುತ್ತಿರುವ ತನ್ನ ಅಮ್ಮನೂ ಕಡಿಮೆಯೇನಲ್ಲ ಅಂತ ಕೂಡ ಹೇಳಿದ. ಮುಂದೊಂದು ದಿನ ಅವನ ಪಾಲನೆ ಪೋಷಣೆಗೆ ನಾನು ಖರ್ಚು ಮಾಡಿರುವ ಹಣವನ್ನೆಲ್ಲಾ ಹಿಂದಿರುಗಿಸಿಬಿಡುವುದಾಗಿ, ತನಗೆ ಲೇಪವಾಗಿರುವ ಪಾಪದಿಂದ ವಿಮುಕ್ತಿ ಪಡೆಯುವುದಾಗಿ ಬೊಬ್ಬೆ ಹಾಕಿದ. ನನ್ನ ಬದುಕು ಯಃಕಶ್ಚಿತ್ತಂತೆ. ನನ್ನ ಮಗನೇ ನನ್ನ ಬದುಕನ್ನು ಯಃಕಶ್ಚಿತ್ ಅಂತ ಕರೆದು ಬಿಟ್ಟ."

ಅಗಾಧವಾದ ಮೌನ ಆವರಿಸಿತ್ತು. "ಬಡಿಯಾದರೂ ಹೇಗಿದಾನೆ ?" ಸಂಭಾಷಣೆ ಸ್ವಲ್ಪ ಹಗುರವಾದ ವಿಷಯದ ಕಡೆ ಹರಿಯಲಿ ಎಂಬ ಉದ್ದೇಶದಿಂದ ನಾನು ಕೇಳಿದೆ.

"ಬಡಿಗೆ ತನ್ನದೇ ಸಮಸ್ಯೆಗಳಿವೆ", ಸಿಡ್ ಗೋಲ್ಡಿನ್ ಉತ್ತರಿಸಿದ. ಹಸಿರು ಬಣ್ಣದ ಕುರ್ಚಿಯಲ್ಲಿ ಒಂದು ತೋಳನ್ನು ಬೇರೊಂದು ಬಗೆಯಾಗಿ ಇಟ್ಟುಕೊಳ್ಳುತ್ತಾ ಸಿಡ್ ಗೋಲ್ಡಿನ್ ತನ್ನ ಭಂಗಿ ಬದಲಾಯಿಸಿದ. ತನ್ನ ಕಾಶ್ಮೀರದ ಸ್ಪೋರ್ಟ್ ಜಾಕೆಟ್‌ನ ಹೊರಗೆ ಕಂಕಣದ ಹತ್ತಿರ ತೆಳುವಾದ ಚಿನ್ನದ ಚೈನು ಹೊಳೆಯುತ್ತಿತ್ತು. ಈ ವಯಸ್ಸಿನಲ್ಲಿ ಈ ವ್ಯಕ್ತಿಗೆ ಇದೆಲ್ಲದರ ಅಗತ್ಯ ಇದೆಯೇ ಅಂತ ನಾನು ಒಳಗೇ ಅಂದುಕೊಂಡೆ. "ನಿನ್ನ ಹಳೆಯ ಸ್ನೇಹಿತ ಬಡಿಗೆ ಜೂಜಿನ ಹುಚ್ಚಿದೆ. ಹದಿನೈದು ವರ್ಷಗಳ ಕೆಳಗೆ ಇದು ಪ್ರಾರಂಭವಾಯಿತು. ವಕೀಲನಾಗಿ ಅವನು ಹೆಚ್ಚು ಏನನ್ನೂ ಸಾಧಿಸ್ತಾ ಇರಲಿಲ್ಲ ; ಇದರಿಂದ ಇನ್ನಷ್ಟು ಹಣ ಸಂಪಾದನೆ ಮಾಡಬೇಕು ಅಂದ್ಕೊಂಡಾಗ ಇಸ್ಪೀಟು ಮತ್ತು ಗಾಲ್ಫ್ ಆಟಗಳ ಮೇಲೆ ಬಾಜಿ ಕಟ್ಟಲು ಶುರು ಮಾಡಿದ. ಗ್ಯಾಂಬ್ಲರ್ಸ್ ಅನಾನಿಮಸ್‌ನಲ್ಲಿ ಎರಡು ಬಾರಿ ಹೆಸರು ನೋಂದಾಯಿಸಿಕೊಂಡಿದಾನೆ. ಅವನೇನಾದರೂ ಚಿಕಿತ್ಸೆ ಪಡೆಯದೇ ಹೋದರೆ ಅವನಿಂದ ದೂರವಾಗುವುದಾಗಿ ಅವನ ಹೆಂಡತಿ ಬೆದರಿಕೆ ಹಾಕಿದ್ದಾಳೆ. ಹಾಗಾಗಿ ಈಗ ಮತ್ತೆ ಚಿಕಿತ್ಸೆಗಾಗಿ ಸೇರಿಕೊಂಡಿದ್ದಾನೆ. ಎಲ್ಲ, ಎಲ್ಲ ಗೊಂದಲಮಯವಾಗಿದೆ."

"ಹಾಗಾದರೆ ಸಮಸ್ಯೆ ತುಂಬಾ ಉಲ್ಬಣಾವಸ್ಥೆಯಲ್ಲಿರಬೇಕು ?"

"ಮೊದಮೊದಲು ತಲೆತಪ್ಪಿಸಿಕೊಳ್ಳಲು ನನ್ನ ಹತ್ತಿರ ಹಣಕ್ಕಾಗಿ ಬರ್ತಾ ಇದ್ದ. ಬೇರೆಯವರನ್ನು ಯಾಚಿಸುವುದಕ್ಕೂ ಶುರು ಮಾಡಿದ್ದನೋ ಏನೋ ಗೊತ್ತಿಲ್ಲ. ಪ್ರಾರಂಭದಲ್ಲಿ ಸಣ್ಣ ಮೊತ್ತಕ್ಕಾಗಿ ಬೇಡುತ್ತಿದ್ದ. ಆಮೇಲಾಮೇಲೆ ದೊಡ್ಡ ಮೊತ್ತಕ್ಕಾಗಿ ಗಾಳ ಹಾಕಿದ. ನಾನವನಿಗೆ ಒಮ್ಮೆ ಹೇಳಿದೆ, "ಬಡಿ ಬಾಯ್, ನಿನ್ನ ಪಾಲಿನ ಆಸ್ತಿಯನ್ನು ಬಹಳ ಶೀಘ್ರವಾಗಿ ಖಾಲಿ ಮಾಡ್ಬಿಡ್ತಿದೀಯ". ಪ್ರತಿ ಸಾರಿ ಅವನು ನನ್ನ ಬಳಿ ಬಂದ ನಂತರ ಒಂದು ಮೂರು ನಾಲ್ಕು ತಿಂಗಳು ಏನೂ ತಂಟೆ ಇರುತ್ತಿರಲಿಲ್ಲ. ಇದರ

ನಂತರ ಒಂದು ದೊಡ್ಡ ಬಾಂಬ್‌ಶೆಲ್ ಬೀಳುವುದು ಖಂಡಿತ. ಆ ಹುಡುಗರ ಜೊತೆ ಅವನು ಕಂಠಮಟ್ಟ ಮುಳುಗಿ ಹೋಗಿದ್ದ; ಆ ಮಾತಿನ ಅರ್ಥ ನಿನಗೆ ತಿಳಿಯುತ್ತಲ್ಲ ? ಹಣ ಕೊಡದೇ ಹೋದರೆ ಅವರು ತನ್ನನ್ನು ಕೊಂದು ಬಿಡುವುದಾಗಿ ತಿಳಿಸಿದ. ರಾಷ್ಟ್ರ ಮಟ್ಟದ ಆಟಗಾರ, ಸ್ಫುರದ್ರೂಪಿ–ನನ್ನ ಮಗ ಗೋಳೋ ಅಂತ ಅತ್ತ. ತನ್ನ ತಲೆಯನ್ನು ನನ್ನ ಭುಜಕ್ಕೆ ಒರಗಿಸಿ, "ಅಪ್ಪ, ನೀನು ಹಣ ಕೊಡಲೇಬೇಕು, ಇಲ್ಲ ಅನ್ನಬೇಡ" ಅಂತ ರಂಪ ಮಾಡಿದ. ನಾನು ಹಣವನ್ನಂತೂ ಕೊಟ್ಟೆ, ಎಷ್ಟೇ ಆದರೂ ನಾನವನ ಅಪ್ಪನಲ್ಲವೇ ?"

ಅಷ್ಟು ಬಹಿರಂಗವಾಗಿ ಸಿಡ್ ಗೋಲ್ಸ್ಟನ್ ತನ್ನ ಮಕ್ಕಳ ಬಗ್ಗೆ ನನ್ನ ಜೊತೆ ಮಾತನಾಡಲು ಕಾರಣವೇನೆಂದು ನನಗೆ ಅರ್ಥವಾಗಲಿಲ್ಲ. ಅವರ ಐಭೋಗದ ದಿನಗಳಲ್ಲಿ ಅವನನ್ನು ಮತ್ತು ಅವನ ಮಕ್ಕಳನ್ನು ನಾನು ಬಲ್ಲವನಾಗಿದ್ದು ಈಗ ದೂರದವನಾಗಿದ್ದುದರಿಂದಲೋ ಏನೋ ಇರಬೇಕು. ನನ್ನ ಜೊತೆ ಮನಸ್ಸು ಬಿಚ್ಚಿ ಮಾತನಾಡಿದಷ್ಟು ಸಿಡ್ ಗೋಲ್ಸ್ಟನ್ ತನ್ನ ಹಳೆಯ ಸ್ನೇಹಿತರ ಜೊತೆ ತನ್ನ ಖಾಸಗಿ ವಿಷಯಗಳನ್ನು ಹಂಚಿಕೊಳ್ಳುತ್ತಾನೆ ಎಂದು ಕಲ್ಪಿಸಿಕೊಳ್ಳಲಾರೆ. ಹಸಿರು ಬಣ್ಣದ ಆ ಕುರ್ಚಿಯಲ್ಲಿ ಕುಳಿತು–ನನ್ನ ಕಛೇರಿಗೆ ಪೀಠೋಪಕರಣಗಳನ್ನು ಆರಿಸುವಾಗ ಹಸಿರು ಬಣ್ಣದ ಆ ಕುರ್ಚಿ ನನ್ನ ಮನಸೆಳೆಯಲು ಕಾರಣ, ಪ್ರಾಯಶಃ ಇಂಥ ಕುರ್ಚಿಗಳನ್ನು ನಾನು ಗೋಲ್ಸ್ಟನ್ ಮನೆಯಲ್ಲಿ ಕಂಡಿದ್ದರಿಂದ ಇರಬೇಕು–ನನ್ನೊಡನೆ ಸಿಡ್ ಗೋಲ್ಸ್ಟನ್ ಅಂದು ಮಾತನಾಡಿದ ರೀತಿ ನನಗೆ ಸೋಜಿಗವನ್ನುಂಟು ಮಾಡಿತ್ತು.

"ಡಾ. ಪರ್ಸ್", ಸಿಡ್ ಗೋಲ್ಸ್ಟನ್ ಶುರುಮಾಡಿದ (ಸಿಡ್ ಲರ್ಮನ್‌ನ ಪರಿಚಯವಾಗಿದ್ದ ಮನೆಯಲ್ಲಿ ಓಡಾಡಿಕೊಂಡಿದ್ದ ನನ್ನನ್ನು ಆತ ಹಾಗೆ ಸಂಬೋಧಿಸುವಾಗ ನನಗೆ ವಿಚಿತ್ರವೆನಿಸಿತು) "ನನ್ನ ಮಕ್ಕಳು ನಿಜಕ್ಕೂ ಅಸಾಧಾರಣದವರೋ ಅಥವಾ ನಾನು ಹಾಗೆ ಕನಸು ಕಂಡೆನೋ ! ಒಂದು ಕಾಲದಲ್ಲಿ ಇಡೀ ಜಗತ್ತೇ ಏಡಿ ಮತ್ತು ಬಡಿಯ ಪಾಲಾಗಿತ್ತಲ್ಲವೇ ಡಾಕ್ ? ಅಥವಾ ಇದು ಕೂಡ ಕೇವಲ ನನ್ನ ಕಲ್ಪನೆಯೋ? ಎಂಥ ಅದ್ಭುತವಾದ ಮಕ್ಕಳು. ದೊಡ್ಡವರ ಬಗ್ಗೆ ತುಂಬಾ ಗೌರವ. ಶಿಸ್ತು. ಯಾವತ್ತೂ ತಾಪತ್ರಯಕ್ಕೆ ಸಿಕ್ಕಿದವರಲ್ಲ."

"ಮಿಸ್ಟರ್ ಗೋಲ್ಸ್ಟನ್", ನಾನಂದೆ, "ನಿಮ್ಮ ಮಕ್ಕಳು ಶ್ರೇಷ್ಠರು. ಯಾವುದೇ ತರಹದ ಸಣ್ಣತನ ಸುಳಿಯದ ಧೀಮಂತ ಮಕ್ಕಳು ಅವರು. ನನ್ನ ಬಾಲ್ಯದ ಅತ್ಯಂತ ಸ್ಮರಣೀಯವಾದ ಅನುಭವವೆಂದರೆ ಅವರ ಗೆಳೆತನ ನನಗೆ ಸಿಕ್ಕಿದ್ದು."

"ಈ ನಮುವೆ ಎಲ್ಲಿ ತಪ್ಪಾಯಿತು ಅಂತ ನಿಮ್ಮ ಲೆಕ್ಕ ಡಾಕ್? ನನ್ನದೇನಾದರೂ ತಪ್ಪಿದೆಯಾ ? ನಾವು ಮಕ್ಕಳನ್ನು ಬೆಳೆಸಿದ ರೀತಿ ಇದಕ್ಕೆ ಕಾರಣವೆ ? ನಾನು ಮತ್ತು ನನ್ನ ಹೆಂಡತಿ ಇವರ ಬಗ್ಗೆ ಮಾತನಾಡುವಾಗ ಇಂದಿಗೂ ಇದಕ್ಕೆಲ್ಲಾ ಏನು ಕಾರಣ ಅಂತ ತಿಳಿಯಲಾರೆವು. ನಾವೇ ಅವರನ್ನು ಹಾಳು ಮಾಡಿದೆವಾ ? ಪ್ರಾಯಶಃ ನಿಮಗೆ ನೆನಪಿರಬಹುದು. ಅವರು ಕಾಲೇಜಿನಲ್ಲಿ ಇರುವಾಗ ವೃತ್ತಪತ್ರಿಕೆಗಳಲ್ಲಿ

ನನ್ನ ಹೆಸರು ಬಂದಿತ್ತು; ಏನೋ ಒಂದು ಅಪನಿಂದನೆಯ ನೆಪ: ಇದರಿಂದೇನಾದ್ರೂ ಅವರ ಮೇಲೆ ಪರಿಣಾಮ ಆಗಿರಬಹುದೇ? ಬಹಳ ಚೆನ್ನಾಗಿ ಏಳಿಗೆಯಾಗ್ತಾ ಇದ್ದ ನನ್ನ ಎರಡು ಮಕ್ಕಳಲ್ಲಿ ಒಬ್ಬ ನನ್ನ ವಿರುದ್ಧ ತಿರುಗಿ ಬಿದ್ದ, ಇನ್ನೊಬ್ಬ ಕೈಲಾಗದವನ ಹಾಗೆ ಇಳಿದುಹೋದ–ಇದಕ್ಕೆ ಕಾರಣವೇನಿರಬಹುದು ಡಾಕ್ಟ್ರೆ? ನಾನು ಮತ್ತು ನನ್ನ ಹೆಂಡತಿ ಇದರ ಬಗ್ಗೆ ಎಷ್ಟು ಮಾತನಾಡಿದರೂ ಕಾರಣ ಮಾತ್ರ ಹೊಳೆಯುವುದಿಲ್ಲ. ನನಗಂತೂ ಒಂದೂ ಅರ್ಥವಾಗುವುದಿಲ್ಲ", ನಿಟ್ಟುಸಿರು ಬಿಡುತ್ತಾ ಆತ ಕುಳಿತಲ್ಲಿಂದ ಮೇಲೆದ್ದಿದ್ದ.

ನನಗೂ ಕೂಡ ಇದಕ್ಕೇನು ಕಾರಣವಿರಬಹುದು ಅಂತ ಅರ್ಥವಾಗಲಿಲ್ಲವಾಗಿ, ಅವನಿಗೆ ಸಮಾಧಾನದ ಮಾತುಗಳನ್ನು ಹೇಳಲಾರದವನಾಗಿದ್ದೆ. ಸಿಡ್ ಗೋಲ್ಡಿನ್‌ನ ಪಿತ್ಥಕೋಶದ ಬಗ್ಗೆ ಎರಡನೇ ಬಾರಿ ಸಲಹೆ ಕೊಡುವುದಕ್ಕೆ ನನ್ನಿಂದಾಗಿತ್ತಾದರೂ ಅವನ ಮಕ್ಕಳ ವಿಚಾರವಾಗಿ ಹೇಳಲು ನನ್ನಿಂದ ಸಾಧ್ಯವಿರಲಿಲ್ಲ. ಅದಕ್ಕೆ ಬದಲಾಗಿ ನನ್ನ ರಿಪೋರ್ಟನ್ನು ಬ್ರೂಕ್ಸ್‌ಸಿಗೆ ಕಳುಹಿಸುವುದಾಗಿ ಅವನಿಗೆ ತಿಳಿಸಿದೆ ಮತ್ತು ಮುಂದುವರಿದು ಸಾಮಾನ್ಯ ಆರೋಗ್ಯ ಚೆನ್ನಾಗಿರುವಾಗ ಇಂಥ ಶಸ್ತ್ರಚಿಕಿತ್ಸೆಯಿಂದ ಗಾಬರಿಯಾಗಬೇಕಾದ ಪ್ರಮೇಯವಿಲ್ಲವೆಂದು ಕೂಡ ತಿಳಿಸಿದೆ. ಶ್ರೀಮತಿ ಗೋಲ್ಡಿನ್‌ಗೆ ನನ್ನ ನೆನಪು ಮಾಡಿಕೊಡಲು ಕೇಳಿದೆ. ನನಗೆ ಕೃತಜ್ಞತೆ ಹೇಳಿ ಆತ ಕೈಕುಲುಕಿ ನಡೆದಿದ್ದ; ಮತ್ತೆ ನಾನು ಅವನನ್ನು ಭೇಟಿಯಾದದ್ದು ಸ್ಕೋಕಿಯ ಪಿಸರ್ ಚಾಪಲ್‌ನಲ್ಲಿ ಬಡಿಯ ಶವಸಂಸ್ಕಾರದ ಸಮಯದಲ್ಲಿ.

ನನ್ನ ಕಛೇರಿಯಲ್ಲಿ ಸಿಡ್ ಗೋಲ್ಡಿನ್ ಕುಳಿತಿದ್ದ ಸುಮಾರು ಆರು ತಿಂಗಳಿನ ನಂತರ ಇದು ಜರುಗಿತ್ತು. ಶವಸಂಸ್ಕಾರದ ವಿಧಿಗಳ ನಂತರ ಪಿಸರ್ ಪಾರ್ಕಿಂಗ್ ಜಾಗದಲ್ಲಿ ಬಡಿಯ ಸ್ನೇಹಿತನಾದ ಲಾಯ್ಡ್ ಬ್ರಾಡ್‌ಸ್ಕಿಯಿಂದ ತಿಳಿದ ಪ್ರಕಾರ ಬಡಿ ಬಾಜಿಕಟ್ಟುವ ಹುಚ್ಚಿನಲ್ಲಿ ನೂರು ಗ್ರ್ಯಾಂಡ್‌ನವರೆಗೂ ಹೋಗಿದ್ದ (ಒಂದು ಗ್ರ್ಯಾಂಡ್‌ಗೆ ಸಾವಿರ ಡಾಲರುಗಳು) ನಂತರ ಸಿಂಡಿಕೇಟ್ ಕಲೆಕ್ಷನ್‌ನವರು ಅವನನ್ನು ಹೆದರಿಸಿದ್ದರು. ತನ್ನ ಕಛೇರಿಯಲ್ಲಿ ಬಿಟ್ಟುಹೋಗಿದ್ದ ಆತ್ಮಹತ್ಯೆ ನಿವೇದನೆಯಲ್ಲಿ ತನ್ನ ತಂದೆಯ ಬಳಿ ಮತ್ತೆ ಹಣ ಕೇಳಲು ತನಗೆ ನಾಚಿಕೆಯಾಗುವುದೆಂದೂ ಹಾಗೂ ಬದುಕು ಮುಂದುವರಿಸುವುದೂ ಕೂಡ ಅವಮಾನಕರವಾದದ್ದೆಂದು ಬರೆದಿದ್ದ. ತನ್ನನ್ನ ಅಷ್ಟು ಕಾಲ ಚೆನ್ನಾಗಿ ನೋಡಿಕೊಂಡಿದ್ದಕ್ಕಾಗಿ ತನ್ನ ತಂದೆತಾಯಿಗಳಿಗೆ ನಮಸ್ಕಾರ ತಿಳಿಸಿದ್ದ. ತನ್ನ ಹೆಂಡತಿ ಮತ್ತು ತನ್ನ ಎರಡು ಹೆಣ್ಣು ಮಕ್ಕಳನ್ನು ಕಾಪಾಡಬೇಕೆಂದೂ, ತಾನು ಏನು ಮಾಡಿಕೊಳ್ಳುತ್ತಿರುವೆನೋ–ಲಾಸಾಲೆ ಬೀದಿಯ ಇಪ್ಪತ್ತು ಮೂರನೇ ಮಹಡಿಯ ತನ್ನ ಕಛೇರಿಯ ಕಿಟಕಿಯಿಂದ ಹಾರುವುದು–ಅದನ್ನು ಅವರೆಲ್ಲ ಕ್ಷಮಿಸುವಂತೆಯೂ, ಕಡೆಯವರೆಗೂ ತಾನವರನ್ನು ತುಂಬಾ ಪ್ರೀತಿಸಿದುದನ್ನು ಸದಾ ಅವರು ನೆನಸಿಕೊಳ್ಳುವಂತೆಯೂ ತಿಳಿಸಿದ್ದ.

ಅಂದು ಕಛೇರಿಯಲ್ಲಿ ನನಗೆ ವಿಪರೀತ ಕೆಲಸವಿದ್ದುದರಿಂದ ವೆಸ್ಟ್‌ಸೈಡ್‌ನ

ವಾಡ್ಸ್‌ವರ್ತ್ ಸಿಮೆಂಟರಿಗೆ ಹೋಗಲು ಆಗಲಿಲ್ಲ. ಹದಿನೈದು ನಿಮಿಷದಲ್ಲಿ ನಾನು ವಿಲ್‌ಮೆಟ್ ತಲುಪುವ ಮಾರ್ಗದಲ್ಲಿ ಕಾರು ನಡೆಸುತ್ತಾ ಗೋಲ್ಡಿನ್ ಹುಡುಗರ ಬಗ್ಗೆ ಆಲೋಚಿಸಿದೆನಾದರೂ ಅವರ ಬಗ್ಗೆ ಸಿಡ್ ಮತ್ತು ಜೀನ್ ಗೋಲ್ಡಿನ್‌ರಿಗಿಂತ ಹೆಚ್ಚು ಏನೂ ಹೊಳೆಯಲಿಲ್ಲ. ಬಡಿ ಮತ್ತು ಎಡಿ ಪ್ರತಿಭೆಯುಳ್ಳವರಾಗಿದ್ದರು–ಆ ಪ್ರತಿಭೆ ಒಂದು ಬಗೆಯಲ್ಲಿ ಮಿತವಾದದ್ದು ಎಂಬುದನ್ನು ಒಪ್ಪಿಕೊಂಡರೂ ಸಹ ಅವರು ಪ್ರತಿಭಾವಂತರೇ–ಇದರಿಂದ ಅವರು ಇತರರಿಗಿಂತ ಭಿನ್ನವಾಗಿದ್ದರು. ಪ್ರತಿಭೆಯಿಲ್ಲದ ನನ್ನಂಥವನ ದೃಷ್ಟಿಯಲ್ಲಿ ಅವರು ಇನ್ನಷ್ಟು ಪ್ರಕಾಶವಾಗಿ ಹೊಳೆಯುತ್ತಿದ್ದರಲ್ಲದೆ, ಒಂದು ರೀತಿ ಮಾಂತ್ರಿಕ ವ್ಯಕ್ತಿಗಳು ಅವರು ಎಂತಲೂ ಅನ್ನಿಸುತ್ತಿತ್ತು. ಅವರಿಬ್ಬರ ದುಃಖಕರವಾದ ಅಂತ್ಯ–ಶಿಕಾಗೋದ ಅಂಗಡಿ ಸಾಲುಗಳ ಪೇವ್‌ಮೆಂಟಿನ ಮೇಲೆ ಬಡಿಯ ಮರಣ, ಬದುಕಿನುದ್ದಕ್ಕೂ ಏನೂ ಅದ್ಭುತವಾದುದನ್ನು ಸಾಧಿಸದೆ ಮದುವೆ ಇತ್ಯಾದಿಗಳಿಲ್ಲದೆ ಅಂಡಲೆಯುವ ಎಡಿ–ಪ್ರಜ್ವಲಿಸಿದ ಅವರ ಆರಂಭದ ಬದುಕಿನ ಜೊತೆ ಏನಾದರೂ ಸಂಬಂಧ ಹೊಂದಿರಬಹುದೆ? ಪ್ರತಿಭೆಯು ವರ ಅನಿರ್ವಚನೀಯವಾದ ಒಂದು ಶಾಪವನ್ನೂ ಕೂಡ ತನ್ನೊಡನೆ ಅಡಗಿಸಿಟ್ಟುಕೊಂಡಿತ್ತೆ? ಇಂಥ ಗಹನವಾದ ಪ್ರಶ್ನೆಗಳಿಗೆ ಉತ್ತರ ಕೊಡಲು ನನ್ನಲ್ಲಿ ಸಾಮರ್ಥ್ಯವಾಗಲೀ ವ್ಯವಧಾನವಾಗಲಿ ಇಲ್ಲ, ಕಾರಣ, ನನ್ನ ಕಛೇರಿಯಲ್ಲಿ ಜನರು ಈಗ ತಂಡೋಪತಂಡವಾಗಿ ನೆರೆದಿರಬಹುದು, ಸದ್ಯಕ್ಕೆ ಅವರು ಪಾರ್ಶ್ವವಾಯುವಿನಿಂದ, ಹೃದಯಾಘಾತದಿಂದ, ಕ್ಯಾನ್ಸರ್‌ನಿಂದ ಸಾಯುವುದಿಲ್ಲ ಎಂದು ಮುಂತಾಗಿ ಭರವಸೆ ನೀಡಬೇಕಾಗಿರುವುದು ನನ್ನ ಕೆಲಸ. ಅನೇಕ ವರ್ಷಗಳ ಕಾಲ ಆರಾಮವಾಗಿ ಬದುಕುತ್ತೀರಿ ಎಂದು ಧೈರ್ಯ ಹೇಳಬೇಕಾಗಿತ್ತು. ಪ್ರತಿಭೆ ಗಿತಿಭೆಯ ಬಗ್ಗೆ ತಲೆಕೆಡಿಸಿಕೊಳ್ಳದೆ ಅನೇಕ ವರ್ಷಗಳ ಕಾಲ ಬದುಕುಳಿಯಲು ಆಸೆ ಪಡುವ ಮಂದಿ ಅವರು. ನನ್ನ ಸ್ನೇಹಿತರಾದ ಗೋಲ್ಡಿನ್ ಹುಡುಗರು–ಬಡಿ ಮತ್ತು ಎಡಿ–ಅವರಷ್ಟು ಭಾಗ್ಯವಂತರಲ್ಲ.

# ಜಯಕಾಂತನ್ ಅವರೊಡನೆ ಸಂದರ್ಶನ*

ಸಂದರ್ಶಕರು : ರಣವೀರ್ ರಾಂಗ್ರ
ಅನುವಾದ : ಎಸ್. ಎಸ್. ಶಾರದಾ ಪ್ರಸಾದ್

ಸ್ವಾತಂತ್ರ್ಯೋತ್ತರ ಕಾಲದಲ್ಲಿ ಮುಂಚೂಣಿಗೆ ಬಂದ ತಮಿಳು ಕಥೆಗಾರರ ಪೈಕಿ ಜಯಕಾಂತನ್‌ರವರಿಗೆ ಪ್ರಮುಖ ಸ್ಥಾನವಿದೆ. 'ಅಗ್ನಿಪ್ರವೇಶ', 'ಯುಗಸಂಧಿ' ಮೊದಲಾದ ಪ್ರಗತಿಪರ ಕಥೆಗಳಿಂದ ಅವರು ಖ್ಯಾತರಾದರು. ಧರ್ಮ ಮತ್ತು ನೈತಿಕತೆಯ ಹೆಸರಿನಲ್ಲಿ ಶ್ರೀಸಾಮಾನ್ಯನ ಮೇಲೆ ಘೋರಕೃತ್ಯಗಳನ್ನು ನಿರಂತರವಾಗಿ ನಡೆಸುತ್ತಿರುವ ಅವನತ ಸ್ಥಿತಿಯಲ್ಲಿರುವ ಸಾಮಾಜಿಕ ವ್ಯವಸ್ಥೆ ಮೇಲೆ ಈ ಕಥೆಗಳು ತೀವ್ರ ಪ್ರಹಾರ ಮಾಡಿದುವು. ನೈತಿಕತೆಯ ಪಾಲಕರು ಇದನ್ನು ನಿಷ್ಕ್ರಿಯರಾಗಿ ಸಹಿಸದೆ ಅವರೆಲ್ಲ ಒಕ್ಕೊರಲಿನಿಂದ ಜಯಕಾಂತನ್‌ರ ಬರೆವಣಿಗೆಯನ್ನು ಖಂಡಿಸಿದರು. ಈ ವಿಮರ್ಶಕರಿಗೆ ಜಗ್ಗದೆ ಜಯಕಾಂತನ್, ಭ್ರಷ್ಟ ವ್ಯವಸ್ಥೆಯ ಬಗ್ಗೆ ತಮ್ಮ ಸತತ ದಾಳಿ ಮುಂದುವರಿಸಿದರು ; ಅತ್ಯಲ್ಪ ಸಮಯದಲ್ಲಿಯೇ, ತುಳಿತಕ್ಕೆ ಸಿಲುಕಿದವರ ಸಮರ್ಥಕರಾದರು. ಅವರ ಸಣ್ಣ ಕಥೆಗಳು ಅವರಿಗೆ ನಿಂದಾಸ್ತುತಿಗಳೆರಡನ್ನೂ ವಿಪುಲವಾಗಿಯೇ ದೊರಕಿಸಿಕೊಟ್ಟವು.

'ಅಗ್ನಿಪ್ರವೇಶಂ'– ಜಯಕಾಂತನ್‌ರ ಅತ್ಯಂತ ವಿವಾದಾಸ್ಪದ ಕಥೆ. ತಮಿಳಿನ ಖ್ಯಾತ ಸಾಪ್ತಾಹಿಕ 'ಆನಂದವಿಕಟನ್'ನಲ್ಲಿ ಇದು ಪ್ರಕಟಗೊಂಡು (1966) ಉನ್ನತ ಸಾಮಾಜಿಕ–ಧಾರ್ಮಿಕ ವಲಯಗಳಲ್ಲಿ ಅಲ್ಲೋಲಕಲ್ಲೋಲ ಉಂಟುಮಾಡಿತು. ಸಂಪ್ರದಾಯವಾದಿಗಳು ರೋಷಗೊಂಡರು. ಸಂಪ್ರದಾಯನಿಷ್ಠರ ದೃಷ್ಟಿಯಲ್ಲಿ ಕಥಾನಾಯಕಿ ತಪ್ಪು ಮಾಡಿರುವಳೆಂದು ಭಾವಿತಳಾಗಿದ್ದು, ಕೊನೆಯಲ್ಲಿ ಅವಳು ಆತ್ಮಹತ್ಯೆ ಮಾಡಿಕೊಳ್ಳುವ ರೀತಿಯಲ್ಲಿ ಕಥಾಂತ್ಯವನ್ನು ಮಾರ್ಪಡಿಸಲಾಯಿತು. ಅನಂತರದಲ್ಲಿ

---

* 'ಇಂಡಿಯನ್ ಲಿಟರೇಚರ್', ಸಂ. 32, ಸಂ. 3, (131, ಮೇ–ಜೂನ್ 1989) ಪುಟಗಳು 100–108–ಇದರಲ್ಲಿನ ಸಂದರ್ಶನದ ಅನುವಾದ. ಸಾಹಿತ್ಯ ಅಕಾಡೆಮಿಗೆ ಅನುವಾದಕ ಕೃತಜ್ಞನಾಗಿದ್ದಾನೆ.

ಹಲವು ಖ್ಯಾತ ಪತ್ರಿಕೆಗಳಲ್ಲಿ ಈ ಕಥೆ ಪ್ರಕಟವಾಯಿತು. ಮಳೆಗಾಲದ ಒಂದು ಸಂಜೆ ಬಸ್ಸಿಗಾಗಿ ಕಾಯುತ್ತಿದ್ದ ವಿದ್ಯಾರ್ಥಿನಿಗೆ ಕಾರಿನಲ್ಲಿ 'ಲಿಫ್ಟ್' ಕೊಟ್ಟು ಅವಳ ಮೇಲೆ ಅತ್ಯಾಚಾರ ಮಾಡಲಾಗುತ್ತದೆ. ಮನೆ ತಲುಪಿದ ಆಕೆ ತನ್ನ ತಾಯಿಗೆ ಈ ಘೋರ ಘಟನೆಯನ್ನು ವಿವರಿಸುತ್ತಾಳೆ; ತಾಯಿ ಕರುಣೆಯಿಲ್ಲದೆ ಅವಳನ್ನು ಬಡಿಯುತ್ತಾಳೆ. ಅನಂತರ ತನಗೆ ತಾನೇ ಸಮಾಧಾನ ತಂದುಕೊಂಡು, ಮಗಳಿಗೆ ಬುದ್ಧಿ ಹೇಳುತ್ತಾಳೆ. ಈ ಬುದ್ಧಿಮಾತೇ ಸಮಾಜದ 'ರಕ್ಷಕರನ್ನು' ಕೆರಳಿಸಿದ್ದು.

ಕೊಡಗಟ್ಟಲೆ ನೀರು ಸುರಿದು ಅವಳಿಗೆ ಚೆನ್ನಾಗಿ ಸ್ನಾನ ಮಾಡಿಸಿದ ಮೇಲೆ ತಾಯಿ ಹೇಳಿದಳು. "ನೋಡು, ನೀನು ಶುದ್ಧವಾಗಿಬಿಟ್ಟೆಯಮ್ಮಾ. ನಿನ್ನ ಮೇಲೆ ಈಗ ಕಳಂಕವೇ ಇಲ್ಲ. ಮನಸ್ಸಿನಲ್ಲಿ ಕಲ್ಮಷವಿದ್ದರೇನೇ ಅದು ಕೆಟ್ಟದ್ದು. ನಿನ್ನ ಮನಸ್ಸು ನನಗೆ ಚೆನ್ನಾಗಿ ಗೊತ್ತು. ಪ್ರಪಂಚಕ್ಕೆ ಗೊತ್ತೇನು? ಅದಕ್ಕಾಗಿ ಹೇಳುತ್ತೇನೆ, ಇದು ಯಾರಿಗೂ ತಿಳಿಯಬಾರದೆಂದು... ನನಗೆ ಇನ್ನೂ ಮಗುವೇ,... ಆದರೆ ಪ್ರಪಂಚಕ್ಕೆ ಮಗುವಲ್ಲ... ಇನ್ನು ಅದನ್ನು ಮರೆತುಬಿಡು. ಏನು, ಮರೆತುಬಿಡು ಎಂದು ಹೇಳಿದೆನೆ? ಅದನ್ನು ಮರೆಯದೆ ವರ್ತಿಸು. ಯಾರ ಹತ್ತಿರವೂ ಈ ವಿಚಾರ ಮಾತನಾಡಬೇಡ. ಈ ಒಂದು ವಿಚಾರದಲ್ಲಿ ಮಾತ್ರ ಸ್ನೇಹಿತರು, ಆತ್ಮೀಯರು ಎಂಬುವರಿಲ್ಲ. ಯಾರ ಬಳಿಯೂ ಇದನ್ನು ಹೇಳುವುದಿಲ್ಲವೆಂದು ನನ್ನ ಕೈಮೇಲೆ ಕೈಯಿಟ್ಟು ಆಣೆಯಿಡು.... ಹುಂ!" ತನ್ನ ರಹಸ್ಯವನ್ನು ಕಾಪಾಡಿಕೊಳ್ಳುವುದಕ್ಕಾಗಿ ಆಣೆಯಿಡುವಂತೆ ಕೇಳಿ ಕೈತೋರಿ ಎದುರಿಗೆ ನಿಂತ ತನ್ನ ತಾಯಿಯ ಕೈಯಲ್ಲಿ ತನ್ನ ಕೈಯನ್ನಿಟ್ಟು ಬಿಗಿಯಾಗಿ ಹಿಡಿದು "ಸತ್ಯವಾಗಿ.... ಯಾರ ಬಳಿಯೂ ಹೇಳುವುದಿಲ್ಲ" ಎನ್ನುತ್ತಾಳೆ.

ಜಯಕಾಂತನ್‌ರ ಇತರ ಅನೇಕ ಕಥೆಗಳು ತಮ್ಮ ವಾಸ್ತವಿಕ ನಿರೂಪಣೆ ಹಾಗೂ ಪ್ರಗತಿಗಾಮಿ ನೀತಿಯಿಂದಾಗಿ ಹಲವು ವರ್ಷಗಳವರೆವಿಗೆ ವಿವಾದದ ಸುಳಿಯಲ್ಲಿ ಸಿಲುಕಿದ್ದವು. ಉದಾ : 'ನಾನಿರುಕ್ಕಿರೇನ್' (ನಾನಿದ್ದೇನೆ–1962, ಆನಂದವಿಕಟನ್), 'ಇರುಳೈ ತೇಡಿ' (ಕತ್ತಲನ್ನು ಹುಡುಕಿ, 1964, ಆನಂದವಿಕಟನ್), 'ಯುಗಸಂಧಿ'. ಅವರು ಹಲವು ಕಾದಂಬರಿ ಮತ್ತು ನಾಟಕಗಳನ್ನು ಬರೆದಿರುವರು. ಅವರ ಮುಖ್ಯ ಕಾದಂಬರಿಗಳು : 'ಒರು ಮನಿದನ್, ಒರು ವೀಡು, ಒರು ಉಲಗಂ' (ಒಬ್ಬ ಮನುಷ್ಯ, ಒಂದು ಮನೆ, ಒಂದು ಪ್ರಪಂಚ) ಮತ್ತು 'ಸಿಲ ನೇರಂಗಳಿಲ್ ಸಿಲ ಮನಿದರ್ಗಳ್' (ಕೆಲವು ವೇಳೆಗಳಲ್ಲಿ ಕೆಲವು ವ್ಯಕ್ತಿಗಳು). 'ಪ್ಯಾರಿಸಿಕ್ಕುಪ್ಪೋ' ಅವರ ಸುಪ್ರಸಿದ್ಧ ನಾಟಕ. ಅವರು ಆತ್ಮಕಥನ 'ಇಳಕ್ಕಿಯವಡಿಯಿನ್ ಕಲೈಉಲಗ ಅನುಭವಂಗಳ್' (ಸಾಹಿತ್ಯ ಪ್ರಪಂಚದ ಅನುಭವಗಳು) ಪ್ರಕಟಿಸಿದ್ದಾರೆ. ಅವರು ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ತಮಿಳು ವಿಶ್ವವಿದ್ಯಾಲಯದ ರಾಜರಾಜನ್ ಪ್ರಶಸ್ತಿ ಸೇರಿದಂತೆ ಹಲವು ಪ್ರಶಸ್ತಿಗಳನ್ನು ಗಳಿಸಿದ್ದಾರೆ.

ರಣಧೀರ್ ರಾಂಗ್ರ : ನಿಮ್ಮ ಕಥೆ ಕಾದಂಬರಿಗಳ ಅನೇಕ ಪಾತ್ರಗಳನ್ನು ನೀವು ಜೀವನದಿಂದಲೇ–ಸಾಕಷ್ಟು ಮಟ್ಟಿಗೆ ಪರಿವರ್ತಿಸಿ–ತೆಗೆದುಕೊಂಡಿರಬೇಕು. ನಿಜಜೀವನದಲ್ಲಿ ಅವರ ಬಗ್ಗೆ ನಿಮ್ಮ ಮೌಲ್ಯನಿಷ್ಕರ್ಷೆಯು ಸೃಜನಾತ್ಮಕ ಪ್ರಕ್ರಿಯೆಯಲ್ಲಿ ಪ್ರಮುಖ ಬದಲಾವಣೆಗೆ ಒಳಗಾಗಿದೆ ಹಾಗೂ ಸತ್ಯದ ಸಮೀಪಕ್ಕೆ ನೀವು ಸಾಗಿರುವಿರಿ ಎಂದು ನಿಮಗೆ ಯಾವಾಗಲಾದರೂ ಅನ್ನಿಸಿದೆಯೇ ?

ಜಯಕಾಂತನ್ : ನಾನು ಜೀವನದಿಂದ ಪಾತ್ರಗಳನ್ನು ತೆಗೆದುಕೊಳ್ಳುತ್ತೇನೆ ; ಸಾಧಾರಣವಾಗಿ ಜೀವನದಲ್ಲಿನ ಜನರು – ಯಾವುದೇ ನಿರ್ದಿಷ್ಟ ಜೀವಂತ ವ್ಯಕ್ತಿಯಲ್ಲ –ನನ್ನಲ್ಲಿ ಭಾವನೆಗಳನ್ನು ತುಂಬುತ್ತಾರೆ. ನಾನು ಈ ಭಾವನೆಗಳನ್ನು ಪಾತ್ರಗಳ ರೂಪದಲ್ಲಿ ಇಡುತ್ತೇನೆ. ಹಲವಾರು ಭಾವನೆಗಳಿರುತ್ತವೆ. ಅವು ಪರಸ್ಪರ ವಿರುದ್ಧವಾಗಿರುತ್ತವೆ. ಮೊದಲನೆಯ ಭಾವನೆಯು ಒಂದು ಪಾತ್ರದ ರೂಪ ತಳೆದರೆ ಎರಡನೆಯ ಭಾವನೆಯು ಇನ್ನೊಂದು ಪಾತ್ರದ ರೂಪುದಳೆಯುತ್ತದೆ. ಹಾಗಾಗಿ ಜೀವನದಲ್ಲಿನ ವ್ಯಕ್ತಿಗಳಿಂದ ನಾನು ನನ್ನ ಪಾತ್ರಗಳನ್ನು ರೂಪಿಸಿ, ಸೃಷ್ಟಿಸಲು ಕಲಿಯುತ್ತೇನೆ. ಅವುಗಳ ಮೂಲಕ, ನಾನು ಅನುಭವಿಸಿದಂತೆ ಜೀವನ ಸತ್ಯವನ್ನು ಚಿತ್ರಿಸುತ್ತೇನೆ.

ರಾಂಗ್ರ : 'ನಾನಿರುಕ್ಕಿರೇನ್' ಹಾಗೂ 'ಶುಯದರ್ಶಿನಂ' (ನನ್ನನ್ನು ನಾನೇ ಕಂಡೆ)ಯ ನಾಯಕರನ್ನು ಕುರಿತು ನಾನು ಈ ಮಾತು ಹೇಳಿದೆ. ಮೊದಲನೆಯ ಕಥೆಯಲ್ಲಿ ಹೆಳವ ಬಾಲಕನೊಬ್ಬ ಅಪಮಾನಿತನಾಗಿ ಮನೆಯಿಂದ ಓಡಿಹೋಗಿ ಆತ್ಮಹತ್ಯೆ ಮಾಡಿಕೊಳ್ಳಲು ಯತ್ನಿಸುತ್ತಾನೆ. ಕುಷ್ಠರೋಗಿಯೊಬ್ಬ ಅವನನ್ನು ಉಳಿಸುತ್ತಾನೆ ; ಜೀವನದ ಎಲ್ಲ ಸಮಸ್ಯೆಗಳ ವಿರುದ್ಧ ಸೆಣಸಿ ಜೀವಿಸಲು ಸ್ಫೂರ್ತಿ ನೀಡುತ್ತಾನೆ.

ಜಯಕಾಂತನ್ : ಇಲ್ಲಿ ಎರಡು ಅಂಶಗಳಿವೆ : ಪ್ರತಿಯೊಬ್ಬರೂ ಪೂರ್ತಿ ಹೀನಾಯವಾಗಿ ಕಾಣುವ ಕುಷ್ಠರೋಗಿ ಒಬ್ಬ ; ದೂಷಣೆ, ಅಪಮಾನಗಳಿಗೆ ಗುರಿಯಾಗುವ ಜೀವನವನ್ನೇ ದ್ವೇಷಿಸುವ ಹೆಳವನೊಬ್ಬ. ಎರಡೂ ಕೂಡ ನನಗೆ ಹಿಡಿದುವು ; ಅವರಿಬ್ಬರನ್ನೂ ಒಗ್ಗೂಡಿಸಿ, ಅವರಿಬ್ಬರೂ ಜೀವನದ ಬಗ್ಗೆ ಆಶಾವಾದಿ ದೃಷ್ಟಿಕೋನವನ್ನು ಹೊಂದಿರುವಂತೆ ಏಕೆ ಮಾಡಬಾರದು ಎಂದು ನನಗೆ ಎನಿಸಿತು. ಈ ಭಾವನೆಗಳು ನನ್ನನ್ನು ಈ ಕಥೆಯನ್ನು ಬರೆಯುವಂತೆ ಮಾಡಿದವು.

ರಾಂಗ್ರ : ಆದರೆ ಅಂತ್ಯ ನಿರಾಶಾವಾದಿತ್ವಪ್ರಾಗಿದೆಯಲ್ಲ. ಹೆಳವನು ಜೀವನ ನಡೆಸುವಂತೆ ಸ್ಫೂರ್ತಿ ನೀಡಿದ ಕುಷ್ಠರೋಗಿಯೇ ಇದ್ದಕ್ಕಿದ್ದಂತೆ ಆತ್ಮಹತ್ಯೆ ಮಾಡಿಕೊಳ್ಳುವನಲ್ಲ.

ಜಯಕಾಂತನ್ : ಏಕೆಂದರೆ ಆತ್ಮಹತ್ಯೆಯ ಭಾವನೆಯು ತನ್ನ ಸೂಚಿತಾರ್ಥಕ್ಕಿಂತಲೂ ಹೆಚ್ಚು ಸೋಂಕಿನದಾಗಿರುತ್ತದೆ.

ರಾಂಗ್ರ : ನೀವು ಪ್ರತಿಮೆಗಳು, ಘಟನೆಗಳು ಅಥವಾ ವ್ಯಕ್ತಿಗಳಿಂದ ಕಥೆ ಪ್ರಾರಂಭಿಸುತ್ತೀರಾ ?

ಜಯಕಾಂತನ್ : ಪ್ರತಿಮೆಗಳು, ಘಟನೆಗಳು, ವ್ಯಕ್ತಿಗಳು – ಇವೆಲ್ಲ ಅನುಕಂಪವನ್ನು ಚಿತ್ರಿಸಲು ಭಾವನೆಗಳನ್ನು ಕಲ್ಪಿಸುತ್ತವೆ. ಜೀವನ ಸ್ವರೂಪತಃ ಅನುಕಂಪದಿಂದ ಕೂಡಿರುವುದಿಲ್ಲ. ಹಾಗಾಗಿ ಈ ಭಾವನೆಗಳ ಮೂಲಕವಾಗಿ ನಾನು ಈ ಅನುಕಂಪರಹಿತ ಜೀವಿಗಳಲ್ಲಿ ಅನುಕಂಪ ಗುಣವನ್ನು ತುಂಬಲು ಪ್ರಯತ್ನಿಸುತ್ತೇನೆ. ನನ್ನ ಭಾವನೆಗಳಿಗೆ ನನ್ನ ಕಥೆಗಳ ಮೂಲಕ ಮೂರ್ತರೂಪ ಕೊಡುತ್ತೇನೆ. ನನ್ನ ಪಾತ್ರಗಳು ಯಾವುದೇ ನಿರ್ದಿಷ್ಟ ವ್ಯಕ್ತಿಯನ್ನು ಆಧರಿಸಿರುವುದಿಲ್ಲ. ಯಾವನೇ ಒಬ್ಬ ವ್ಯಕ್ತಿ ಆ ಮಟ್ಟಿಗೆ ನನ್ನ ಮೇಲೆ ಪರಿಣಾಮ ಬೀರಿಲ್ಲ.

ರಾಂಗ್ರ : ನೀವು ಸಣ್ಣಕಥೆಗಳು, ಕಾದಂಬರಿಗಳು ಹಾಗೂ ಏಕಾಂಕ ನಾಟಕಗಳನ್ನು ಬರೆದಿದ್ದೀರಿ. ನಿಮ್ಮ ಬರವಣಿಗೆಯ ಪ್ರಕಾರವನ್ನು ಯಾವ ರೀತಿ ನಿರ್ಧರಿಸುತ್ತೀರಿ ? ನೀವು ಒಂದು ಪ್ರಕಾರದಲ್ಲಿ ಆರಂಭಿಸಿ – ಉದಾಹರಣೆಗೆ ಸಣ್ಣಕಥೆ ಎನ್ನಿ – ಅದರಲ್ಲಿ ಹೆಚ್ಚು ಮುನ್ನಡೆ ಸಾಧಿಸಲಾಗದೆ ಮತ್ತೊಂದು ಪ್ರಕಾರಕ್ಕೆ ಬದಲಾಯಿಸಿಕೊಳ್ಳಬೇಕಾಗಿ ಬಂದುದು ಯಾವಾಗಲಾದರೂ ಇದೆಯೇ? ಎನ್. ಬಿ. ಟಿ. ಯವರು ಹಿಂದಿಯಲ್ಲಿ ಪ್ರಕಟಿಸಿರುವ ನಿಮ್ಮ ಸಣ್ಣಕಥೆಗಳ ಸಂಕಲನದ 'ಮುನ್ನುಡಿ'ಯಲ್ಲಿ ನಿಮ್ಮ ಕೆಲವು ಸಣ್ಣಕಥೆಗಳನ್ನು ವಿಸ್ತರಿಸಿರುವ ಬಗ್ಗೆ ಹೇಳಿದ್ದೀರಿ. ನಿಮ್ಮ ಸಣ್ಣಕಥೆ 'ಬಹಿಷ್ಕೃತ', ನೀವೇ ಹೇಳಿರುವಂತೆ, ನಿಮ್ಮ ಮನದಲ್ಲಿ ಮೂಡುತ್ತಿದ್ದ ಏಕಾಂಕ ನಾಟಕವನ್ನು ಪ್ರತಿನಿಧಿಸುತ್ತದೆ. ಅವುಗಳ ರೂಪವನ್ನು ಬದಲಾಯಿಸಲು ಕಾರಣಗಳೇನು ?

ಜಯಕಾಂತನ್ : ಪರಿಸರದ ಒತ್ತಡವೇ ಬಹುಮಟ್ಟಿಗೆ ಪ್ರಕಾರ ಮೂಡಲು ಕಾರಣ. ಮೊದಲಿಗೆ ವಸ್ತು ಬರುತ್ತದೆ; ಅನಂತರ ಅದರ ಅಭಿವ್ಯಕ್ತಿಯ ಸಮಸ್ಯೆ ಉದ್ಭವಿಸುತ್ತದೆ. ಆದರೆ ಪ್ರಕಾರವನ್ನು ಅಂತಿಮವಾಗಿ ನಿರ್ಧರಿಸುವುದು ಪರಿಸರದ ಒತ್ತಡವೇ. ಹಿಂದೆ ನಾವು ಒತ್ತಡದಲ್ಲಿ ಬರೆಯುತ್ತಿದ್ದೆವು. ಮುದ್ರಣ ತಂತ್ರಜ್ಞಾನ ಈ ರೀತಿಯಲ್ಲಿ ಅಭಿವೃದ್ಧಿಗೊಳ್ಳದಿದ್ದುದರಿಂದ ಪರಿಸರದ ಒತ್ತಾಯದಿಂದ ನಾವು ಹಾಗೆ ಮಾಡುತ್ತಿದ್ದೆವು. ಗದ್ಯ, ಸಣ್ಣಕಥೆ ಮತ್ತು ಕಾದಂಬರಿ ಸಾಮಾನ್ಯವಾಗಿ ವಿಜ್ಞಾನದ ಉತ್ಪನ್ನಗಳು. ವಸ್ತು, ಭಾವನೆ ಮೊದಲು ಇರುತ್ತದೆ. ಅನಂತರ ಲೇಖಕನಾಗಿ, ನಾನು ಸಣ್ಣಕಥೆ ಬರೆಯಲು ಯಾರಿಗಾದರೂ ಮಾತು ಕೊಟ್ಟಿದ್ದರೆ ಆಗ ಸಣ್ಣಕಥೆಯ ರೂಪದಲ್ಲಿ ಬರೆಯುವ ಬಗ್ಗೆ ಆಲೋಚಿಸುತ್ತೇನೆ. ಕಥೆಯಿಂದ ನನಗೆ ತೃಪ್ತಿಯಾಗುವುದಾದರೂ ಸಣ್ಣಕಥೆ ಬರೆಯುವುದಷ್ಟರಿಂದಲೇ ನನ್ನ ಸಮಸ್ಯೆ ಮುಗಿಯುವುದಿಲ್ಲ. ಅದು ಒಂದು ಹೊಸ ರೂಪದಲ್ಲಿ, ವಿಸ್ತೃತ ರೂಪದಲ್ಲಿ ಮನಸ್ಸಿನಲ್ಲಿ ಉಳಿದಿರುತ್ತದೆ.

ಆದ್ದರಿಂದ ಮತ್ತೆ ಪ್ರಯತ್ನಿಸುತ್ತೇನೆ. ಸಣ್ಣ ಕಾದಂಬರಿ ಬರೆಯುತ್ತೇನೆ; ಕೆಲವೊಮ್ಮೆ ಕಾದಂಬರಿಯಾಗಿಯೂ ವಿಸ್ತರಿಸುತ್ತೇನೆ.

ರಾಂಗ್ರ : ನಿಮ್ಮ ಸಣ್ಣಕಥೆ 'ಅಗ್ನಿಪ್ರವೇಶ'ಕ್ಕೆ ಸಂಬಂಧಿಸಿದಂತೆ. ಅದೇ ವಸ್ತುವಿನ ಮೇಲೆ ನೀವು ಕಾದಂಬರಿ ಬರೆದುದಾಗಿಯೂ, ಅದರ ಅಂತ್ಯವನ್ನು ಜನತೆ ಮೆಚ್ಚಲಿಲ್ಲವಾಗಿಯೂ, ಅಂತ್ಯವನ್ನು ಬದಲಾಯಿಸಿ ಮತ್ತೆ ಬರೆದುದಾಗಿಯೂ ತಿಳಿಸಿದ್ದೀರಿ.

ಜಯಕಾಂತನ್ : ಹೌದು, ಹಾಗೇ ಆಯಿತು. ಈ ಸಣ್ಣಕಥೆಯಲ್ಲಿ, ಜೀವನದಲ್ಲಿ ನಡೆವ ಘಟನೆಯೊಂದರ ಬಗ್ಗೆ ಹೇಳುತ್ತಾ, ಆ ಹುಡುಗಿಯನ್ನು ಕ್ಷಮಿಸಬೇಕೆಂಬ ಸೂಚನೆಯಿತ್ತು. ಇದೇ ಆ ಸಣ್ಣಕಥೆಯ ಸಂದೇಶ, ಭಾವನೆ ಹಾಗೂ ವಸ್ತು. ಆದರೆ ಜನ ಒಪ್ಪುವುದಿಲ್ಲ – ಆಕೆಯನ್ನು ಹೇಗೆ ಕ್ಷಮಿಸುವುದು, ಆ ಪಾಪವನ್ನು ಯಾವ ರೀತಿ ಮನ್ನಿಸುವುದು. ಹಾಗಾಗಿ ಅದೇ ಸಮಸ್ಯೆಯನ್ನು ಕುರಿತ ಒಂದು ಕಾದಂಬರಿ ಮೂಡಿತು. ಅದೇ 'ಸಿಲ ನೇರಂಗಳಿಲ್ ಸಿಲ ಮನಿದರ್ಗಳ್' ಎಂಬ ಕಾದಂಬರಿ. ಪ್ರಕಾರವನ್ನು ಸೃಷ್ಟಿಸುವಲ್ಲಿ ಜನತೆಯ ಪಾತ್ರವನ್ನು ಇದು ತೋರಿಸುತ್ತದೆ. ರೂಪದಲ್ಲಿ ಸಂಕ್ಷಿಪ್ತವಾಗಿರುವ ಸಣ್ಣಕಥೆ-ಅಂದರೆ, 'ಅಗ್ನಿಪ್ರವೇಶ'–ಬರೆದೆ. ನಾನು ಇದನ್ನು ಸಣ್ಣಕಥೆ ಎಂದೇ ಕರೆದರೂ ಜನರು ಇದನ್ನು ನೀಳ್ಗತೆ ಎನ್ನುತ್ತಾರೆ. ಅವರು ನನ್ನಲ್ಲಿಗೆ ಬಂದು, ಹೆಚ್ಚು ಹೆಚ್ಚು ಬರೆಯುವಂತೆ ಕೇಳುತ್ತಾರೆ. ಹಾಗಾಗಿ ಅದೇ ಪಾತ್ರಗಳನ್ನು ಇಟ್ಟುಕೊಂಡು–ಅದೇ ಸಮಸ್ಯೆಯ ಬಗ್ಗೆ ನನ್ನದೇ ಆದ ಸೃಷ್ಟಿ-ಕಾದಂಬರಿಯನ್ನು ಬರೆಯುತ್ತೇನೆ.

ರಾಂಗ್ರ : ಆದರೆ ಅದೇ ಸಮಸ್ಯೆ, ಅದೇ ವಸ್ತುವನ್ನು ಕುರಿತು ಹೊಸ ಪಾತ್ರವರ್ಗದೊಡನೆ ಮೊದಲಿನ ಕಾದಂಬರಿಗಳಿಗಿಂತ ಭಿನ್ನವಾದ ವಿಸ್ತೃತವಾದ ಹೊಸ ಕಾದಂಬರಿಯನ್ನು ನೀವು ರಚಿಸಬಹುದಾಗಿತ್ತು.

ಜಯಕಾಂತನ್ : ಆದರೆ ಕೆಲವು ಸಲ ಈ ಮೊದಲೇ ಬರೆದಿರುವಂಥದನ್ನು ಹೊಸ ಸಂಪುಟದಲ್ಲಿ ಮುಂದುವರಿಸಿದಾಗ ವಾಚಕರು ಈಗಾಗಲೇ ಓದಿರುವಂಥದರೊಡನೆ ಸಂಬಂಧ ಕಲ್ಪಿಸುವುದು ಸುಲಭವಾಗುವುದು. ಹಾಗಾಗಿ ರೂಪ ಬದಲಾವಣೆಗೆ ಆಂತರಿಕ ಹಾಗೂ ಬಾಹ್ಯ ಒತ್ತಡಗಳೆರಡೂ ಕಾರಣವಾಗುತ್ತವೆ. ಆಂತರಿಕ ಒತ್ತಡಗಳು ಬಾಹ್ಯ ಒತ್ತಡಗಳೊಡನೆ ಹೊಂದಿಕೊಳ್ಳುತ್ತವೆ.

ರಾಂಗ್ರ : ಈಗಷ್ಟೇ ಉಲ್ಲೇಖಿಸಿದ 'ಮುನ್ನುಡಿ'ಯಲ್ಲಿ, ಲೇಖಕರು ತಮ್ಮ ಓದುಗರ ಮಟ್ಟಕ್ಕೆ ಇಳಿಯುವುದನ್ನು ನೀವು ಇಷ್ಟಪಡುವುದಿಲ್ಲ; ಓದುಗರ ಮಟ್ಟವನ್ನು ಮೇಲಕ್ಕೆತ್ತುವುದನ್ನು ನಿರೀಕ್ಷಿಸುತ್ತೀರಿ. ಎಂದರೆ ಬರೆಯುವ ಸಮಯದಲ್ಲಿ ನೀವು ಓದುಗರನ್ನು ಗಮನದಲ್ಲಿಟ್ಟುಕೊಂಡಿರುತ್ತೀರಾ ?

ಜಯಕಾಂತನ್ : ವಾಚಕರಿಗಾಗಿ ನಾನು ಬರೆಯುವುದಿಲ್ಲ. ಜನರು ಓದಲಿ, ಬಿಡಲಿ ಸಾರ್ವತ್ರಿಕವಾಗಿ ಜನತೆಯನ್ನು ಕುರಿತು ಬರೆಯುತ್ತೇನೆ.

ರಾಂಗ್ರ : ಆದರೆ ನೀವು ಜನತೆಯನ್ನು ಮುಟ್ಟುವುದು ವಾಚಕರ ಮೂಲಕವಾಗಿಯೇ.

ಜಯಕಾಂತನ್ : ನಾನು ವಾಚಕರ ಮಟ್ಟವನ್ನು ಮೇಲೆತ್ತದಿರಬಹುದು, ಆದರೆ ನಾನು ನನ್ನ ಬರವಣಿಗೆಯ ಮೂಲಕ ಜನತೆಯ ಮಟ್ಟವನ್ನು ಎತ್ತರಿಸುತ್ತೇನೆ.

ರಾಂಗ್ರ : ವಾಚಕರು ನಿಮ್ಮನ್ನು ಅರ್ಥಮಾಡಿಕೊಳ್ಳದೆ ಇದು ಹೇಗೆ ತಾನೆ ಸಾಧ್ಯ ?

ಜಯಕಾಂತನ್ : ನನಗೂ ವಾಚಕರಿಗೂ ಅಂಥದೊಂದು ಸಂಬಂಧವಿಲ್ಲ. ಅವರೇನೂ ನನ್ನ ಒಡೆಯರಲ್ಲ. ನಾನು ನನ್ನ ಓದುಗರಿಂದ ಹೆಚ್ಚಿನದನ್ನು ನಿರೀಕ್ಷಿಸಲಾರೆ; ಆದರೆ ಜನತೆಯಿಂದ ತುಂಬ ನಿರೀಕ್ಷಿಸುತ್ತೇನೆ.

ರಾಂಗ್ರ : ವಾಚಕ ಸದಾ ಲೇಖಕನಿಂದ ಹೊರಗಿರುವುದಿಲ್ಲ. ಲೇಖಕನೊಳಗೂ ಒಬ್ಬ ವಾಚಕನಿರುತ್ತಾನೆ.

ಜಯಕಾಂತನ್ : ನನಗೆ ತಿಳಿಯದು. ಅವರನ್ನು ಜನತೆ ಎಂದು ಕರೆಯಬಯಸು ತ್ತೇನೆ, ಓದುಗರು ಎಂದಲ್ಲ. ಹಾಗಾಗಿ ನನ್ನ ಓದುಗರ ಬಗ್ಗೆ ನಾನು ಅಷ್ಟಾಗಿ ಕಾಳಜಿ ವಹಿಸುವುದಿಲ್ಲ. ನಾನು ಬರೆಯುವುದು ಜನತೆಗಾಗಿ.

ರಾಂಗ್ರ : ನೀವು ನಿಮ್ಮ ಅನೇಕ ಸಣ್ಣಕಥೆಗಳಲ್ಲಿ–ಉದಾ : 'ಯುಗಸಂಧಿ', 'ಅಗ್ನಿ ಪ್ರವೇಶ' – ಹೆಣ್ಣಿನ ಮನಸ್ಸನ್ನು ಚಿತ್ರಿಸಿದ್ದೀರಿ. ಲೇಖಕರು ತಮ್ಮ ಸ್ತ್ರೀ ಪಾತ್ರಗಳ ಬಗ್ಗೆ ಪುರುಷ ದೃಷ್ಟಿಕೋನದಿಂದಷ್ಟೇ ನಿರೂಪಿಸುವುದರಿಂದ ಆ ಪಾತ್ರಗಳಿಗೆ ನ್ಯಾಯವೆಸಗಲಾರರು ಎಂಬುದು ಕೆಲವರ ಅನಿಸಿಕೆ. ಈ ವಾದದಲ್ಲಿ ಹುರುಳಿದೆ ಎನ್ನಿಸುತ್ತದೆಯೇ ?

ಜಯಕಾಂತನ್ : ಇಲ್ಲ; ಲೇಖಕ ಬರೆಯುತ್ತಾನೆಯೇ ಲೇಖಕಿ ಬರೆಯುತ್ತಿರುವಳೇ ಎಂಬುದು ಪ್ರಕೃತವಲ್ಲ. ಮಹಿಳೆಯೊಬ್ಬಳನ್ನು ಒಬ್ಬ ಪುರುಷ ಮತ್ತೊಂದು ಹೆಣ್ಣಿಗಿಂತ ಚೆನ್ನಾಗಿ ಅರ್ಥಮಾಡಿಕೊಳ್ಳಬಲ್ಲ; ಏಕೆಂದರೆ ಕೆಲವೊಮ್ಮೆ ಒಬ್ಬ ಮಹಿಳೆ ಮತ್ತೊಬ್ಬಳನ್ನು ಅರ್ಥಮಾಡಿಕೊಳ್ಳಲಾರಳು. ಸ್ತ್ರೀಯು ಸಾಮಾಜಿಕ ವಾಗಿ ತುಳಿತಕ್ಕೆ ಒಳಗಾದ ವರ್ಗ ಎಂದು ನನ್ನ ಭಾವನೆ. ಈ ಆರೋಪ ಮಾಡುವ, ವಿಮೋಚನೆ ಪಡೆದ ಹಾಗೂ ಸಾಮಾನ್ಯ ಹೆಂಗಸಿಗೆ ಸರಿಸಮಳಾಗ ದಂಥ ಸ್ತ್ರೀಗಿಂತ ಅವಳು ತೀರ ಭಿನ್ನಳಾಗಿರುತ್ತಾಳೆ. ಹಾಗಾಗಿ ನನಗೆ ಈ ವಾದ ಅರ್ಥವಾಗುವುದಿಲ್ಲ. ಆದ್ದರಿಂದ ಇದನ್ನು ನಾನು ಒಪ್ಪುವುದಿಲ್ಲ. ಪ್ರೇಮ ಚಂದ್, ತುಳಸಿ, ಕಾಳಿದಾಸ, ಟಾಲ್‌ಸ್ಟಾಯ್ ಇವರೆಲ್ಲರೂ ಲೇಖಕರು; ಆದರೆ ಇವರೆಲ್ಲ ಮಹಿಳೆಯರನ್ನು ಚಿತ್ರಿಸಿರುವ ರೀತಿಯನ್ನು ಯಾರೂ ಪ್ರಶ್ನಿಸ ಲಾರರು. ಲೇಖಕಿಯರು ಸ್ತ್ರೀಪಾತ್ರಗಳನ್ನು ಚಿತ್ರಿಸಲಾರರು ಎನ್ನಲಾರೆ. ಆದರೆ ಈ ಆಧುನಿಕ ಲೇಖಕಿಯರನ್ನು ನಾನು ಓದಿರುವ ಮಟ್ಟಿಗೆ, ಅವರು ಹೆಂಗಸ ರನ್ನು ಅಪಹಾಸ್ಯ ಮಾಡಿದ್ದಾರೆ. ಆದರೆ ಅದೇ ಒಬ್ಬ ಲೇಖಕ ಹಾಗೆ ಮಾಡು ವುದಕ್ಕೆ ಅವರು ಬಿಡುವುದಿಲ್ಲ. ಕೆಲವೊಮ್ಮೆ ಅವರ ಬರವಣಿಗೆಗಳೇ ಪ್ರಗತಿ ವಿರೋಧಿಯಾಗಿರುತ್ತವೆ. ವಾಸ್ತವವಾಗಿ ಯಾರು ಬರೆಯುತ್ತಾರೆ ಎಂಬುದು

ಗೌಣ, ಆತ ಅಥವಾ ಆಕೆ ಏನು ಬರೆಯುತ್ತಾನೆ / ಳೆ ಎಂಬುದಷ್ಟೇ ಮುಖ್ಯ.

ರಾಂಗ್ರ : ನಿಮ್ಮ ಸಣ್ಣಕಥೆಗಳ ಪೈಕಿ ಅತ್ಯುತ್ತಮವೆಂದು ನೀವು ಪರಿಗಣಿಸಿರುವ ಹಾಗೂ ನಿಮಗೆ ಸಮಾಧಾನ ನೀಡಿರುವಂಥ ಕೆಲವನ್ನು ಹೆಸರಿಸುವಿರಾ ?

ಜಯಕಾಂತನ್ : ಈಗಾಗಲೇ ಅನೇಕವನ್ನು ನೀವೇ ಉಲ್ಲೇಖಿಸಿದ್ದೀರಿ. ನಾನು ಮತ್ತೇನೂ ಸೇರಿಸಬೇಕಾಗಿಲ್ಲ. ತೃಪ್ತಿಯ ಪ್ರಶ್ನೆ ಲೇಖಕನಿಗೆ ಸಂಬಂಧಿಸಿರುವುದಾದರೆ ತೀರ್ಮಾನವು ಜನತೆಗೆ ಬಿಟ್ಟಿರುವುದಾಗಿರುತ್ತದೆ. ನಿಮ್ಮ ಭಾವನೆಗಳು, ನೀವು ರಚಿಸುತ್ತಿರುವ ಕಥೆ ಅಥವಾ ಕಾದಂಬರಿಯಲ್ಲಿ ಪೂರ್ಣವಾಗಿ ಅಭಿವ್ಯಕ್ತಗೊಂಡ ಹೊರತು ನಿಮಗೆ ನೆಮ್ಮದಿ ಇರುವುದಿಲ್ಲ. ಹಾಗಾಗಿ ನನ್ನ ಎಲ್ಲ ಬರವಣಿಗೆಗಳೂ ನನಗೆ ತೃಪ್ತಿ ನೀಡಿವೆ. ನನಗೆ ತೃಪ್ತಿಯಾದ ಹೊರತು ನಾನು ಯಾವುದನ್ನೂ ಹೊರಬಿಡುವುದೇ ಇಲ್ಲ. ನನ್ನ ಬರವಣಿಗೆ ನನಗೆ ಸಂಪೂರ್ಣ ಸಂತೋಷ ನೀಡಿದೆ. ಆದರೆ ತೃಪ್ತಿಯಷ್ಟೇ ಸಾಲದು. ನೀವು ಏನನ್ನು ಅನುಭವಿಸುತ್ತೀರೋ ಅದರ ಬಗ್ಗೆ ಹೆಚ್ಚು ಹೆಚ್ಚು ಬರೆಯಬೇಕೆನಿಸುತ್ತದೆ. ಹಾಗಾಗಿ ಬರವಣಿಗೆ ನಿರಂತರವಾಗಿ ಸಾಗುತ್ತಾ ಹೋಗುತ್ತದೆ.

ರಾಂಗ್ರ : ಜೀವನದ ಬಗ್ಗೆ ನಿಮ್ಮ ದೃಷ್ಟಿಕೋನವನ್ನು ಗಣನೀಯವಾಗಿ ಬದಲಾಯಿಸಿದಂಥ ಯಾವುದಾದರೂ ನಿಮ್ಮ ಕೃತಿಯನ್ನು ಹೆಸರಿಸಬಲ್ಲಿರಾ ? ನಾನು ಈ ಪ್ರಶ್ನೆ ಕೇಳಲು ಕಾರಣ : ಸದಾಕಾಲ ಲೇಖಕನೇ ತನ್ನ ಸಾಹಿತ್ಯಕ ಕೃತಿಗಳನ್ನು ಸೃಷ್ಟಿಸುವುದಿಲ್ಲ. ಆತನಿಗೇ ಅರಿವಿಲ್ಲದಂತೆ ಅವನ ಕೃತಿಗಳೂ ಆತನನ್ನು ಸೃಷ್ಟಿಸುವುದುಂಟು ಎಂಬ ಭಾವನೆ ನನಗಿದೆ.

ಜಯಕಾಂತನ್ : ಇಲ್ಲ, ಅದು ತದ್ವಿರುದ್ಧವಾಗಿರುತ್ತದೆ. ನನ್ನ ದೃಷ್ಟಿಕೋನವನ್ನು ಬದಲಾಯಿಸುವುದರ ಬದಲಾಗಿ ನನ್ನ ಬರವಣಿಗೆಗಳಲ್ಲಿ ನನ್ನ ದೃಷ್ಟಿಕೋನ ಅಭಿವೃದ್ಧಿಗೊಂಡಂತೆ ನನ್ನ ಬರವಣಿಗೆಗಳು ಬದಲಾಗುತ್ತವೆ. ನನ್ನ ಕಾದಂಬರಿಗಳ ಪೈಕಿ ಅಂಥ ಒಂದನ್ನು ಹೆಸರಿಸಲೂ ಬಲ್ಲೆ ; 'ಒರು ಮನಿದನ್, ಒರು ವೀಡು, ಒರು ಉಲಗಂ' ಎಂಬುದೇ ಅದು. ಆ ಕಥೆಯ ರಚನೆಗೆ ವಸ್ತುವಾದ ಅನುಭವದಿಂದ ನಾನು ಎಷ್ಟು ಉದಾರ ಹೃದಯಿಯಾದೆನೆಂದರೆ, ಅದಕ್ಕೆ ಸಮನಾದುದನ್ನು ನಾನು ಕಾಣೆ. ಅದಾದಮೇಲೆ ಯಾರೊಬ್ಬರಲ್ಲಿಯೂ ತಪ್ಪು ಹುಡುಕುವುದರಲ್ಲಿ ಯಾವ ಅರ್ಥವೂ ಇಲ್ಲ ಎಂದು ನನಗನ್ನಿಸಿತು. ಒಬ್ಬ ವ್ಯಕ್ತಿ ಏನಾಗಿದ್ದಾನೆ ಎಂಬುದನ್ನು ನಿರ್ಧರಿಸುವುದು ಜೀವನ.

ರಾಂಗ್ರ : ನೀವು ನಿಮ್ಮ ಪಾತ್ರಗಳನ್ನು ಪ್ರಾರಂಭದಿಂದಲೂ ನಿಯಂತ್ರಿಸುವಿರಾ ಅಥವಾ ಅವು ನಿಮ್ಮ ನಿಯಂತ್ರಣ ತಪ್ಪಿಸಿಕೊಂಡು ಸಹಜವಾಗಿಯೇ ಬೆಳೆಯು

ವುವೇ? ವಿಷೇಶವಾಗಿ 'ನಾನಿರುಕ್ಕಿರೇನ್' ಕಥೆಯಲ್ಲಿನ ಹೆಳವ ಹಾಗೂ ಕುಷ್ಠರೋಗಿಯಂಥ ಪಾತ್ರಗಳ ಪರಾಕಾಷ್ಠೆ ನನ್ನ ಆಸಕ್ತಿಯನ್ನು ಕೆರಳಿಸಿದೆ.

ಜಯಕಾಂತನ್ : ಹೌದು, ನಾನು ನನ್ನ ಪಾತ್ರಗಳನ್ನು ತುಂಬ ನಿಯಂತ್ರಿಸುತ್ತೇನೆ. ಈ ಎರಡು ಪಾತ್ರಗಳನ್ನೂ ನಾನು ನಿಯಂತ್ರಿಸಿದೆ. ಅವು ತಾವು ಸ್ವತಂತ್ರ ವೆಂದು ಭಾವಿಸಲು ಸಾಕಷ್ಟು ಅವಕಾಶ ನೀಡಿದ್ದೇನೆ. ನಾನು ನನ್ನ ಪಾತ್ರ ಗಳನ್ನು ನಿಯಂತ್ರಿಸಬಲ್ಲೆ; ಆದರೆ ಅವನ್ನು ತುಂಬ ನಿಯಂತ್ರಿಸಿದರೆ ಅವು ಸೆರೆಗೊಳಗಾಗಿಬಿಡುತ್ತವೆ. ಈ ಎರಡು ಪಾತ್ರಗಳ ಅಂತ್ಯ ಅನಿರೀಕ್ಷಿತವಾಗಿದೆ; ಆದ್ದರಿಂದಲೇ ನಾನು ಅವನ್ನು ಸೃಷ್ಟಿಸಿದೆ. ಅವು ಸಂಪೂರ್ಣವಾಗಿ ಮತ್ತು ತಮಗೆ ಇಚ್ಛೆಬಂದಂತೆ ಬೆಳೆಯಲು ಬಿಟ್ಟೆ.

ರಾಂಗ್ರ : ಒಂದಲ್ಲ ಒಂದು ರೀತಿ ನಿಮ್ಮ ಮೇಲೆ ಪ್ರಭಾವ ಬೀರಿರುವಂಥ ಹಿಂದಿನ ತಮಿಳು ಹಾಗೂ ಇತರ ಭಾರತೀಯ ಮತ್ತು ವಿದೇಶೀ ಭಾಷೆಗಳ ಲೇಖಕರನ್ನು ಹೆಸರಿಸಬಲ್ಲಿರಾ ?

ಜಯಕಾಂತನ್ : ಹೂಂ. ಅನೇಕ ರೀತಿಯಲ್ಲಿ ಪ್ರಭಾವ ಆಗಿದೆ. ತಮಿಳಿನಲ್ಲಿ ಸುಬ್ರಹ್ಮಣ್ಯ ಭಾರತಿ, ಪುದುಮೈಪಿತ್ತನ್ ಹಾಗೂ ನನ್ನ ಸಮಕಾಲೀನರಾದ ರಘುನಾಥನ್, ಚಿದಂಬರಂ ಸುಬ್ರಮಣಿಯಮ್. ಇತರ ಭಾರತೀಯ ಭಾಷೆ ಗಳಲ್ಲಿ ಕೃಷ್ಣಚಂದರ್, ಶರಶ್ಚಂದ್ರ. ಪ್ರೇಮಚಂದ್. ವಿದೇಶೀ ಭಾಷೆಗಳಲ್ಲಿ ಟಾಲ್‌ಸ್ಟಾಯ್, ಶೋಲೋಕಾವ್, ಚೆಕಾವ್, ಜೋಲ್, ಅಸ್ಕರ್ ವೈಲ್ಡ್, ಷೇಕ್ಸ್‌ಪಿಯರ್. ಆದರೆ ಇತರ ಲೇಖಕರಿಂದ ಪಡೆದಿರುವುದು ತುಂಬ ಕಡಿಮೆ.

ರಾಂಗ್ರ : ನಿಮ್ಮ ಸಣ್ಣಕಥೆಗಳಲ್ಲಿ ಹಳೆಯ ಹಾಗೂ ಹೊಸ ಮೌಲ್ಯಗಳ ಸಂಘರ್ಷ ವನ್ನು ಎತ್ತಿತೋರಿಸುತ್ತವೆ. 'ನಾನೆನ್ನ ಶೈಯ್ಯಟ್ಟುಂ ಶೊಲ್ಲುಂಗೋ' (ನಾನೇನು ಮಾಡಲಿ ಹೇಳಿ) ಮತ್ತು 'ಪುದುಶೆರುಪ್ಪು ಕಡಿಕ್ಕು' (ಹೊಸ ಚಪ್ಪಲಿ ಕಚ್ಚುತ್ತದೆ) ಮೊದಲಾದ ಕಥೆಗಳು ಹಳೆಯ ಮೌಲ್ಯಗಳನ್ನು ಎತ್ತಿಹಿಡಿದರೆ, 'ಯುಗಸಂಧಿ', 'ಅಗ್ನಿಪ್ರವೇಶ' ಮೊದಲಾದುವು ಬದಲಾಗುತ್ತಿರುವ ಕಾಲ ದೊಂದಿಗೆ ಹೊಂದಿಕೊಳ್ಳುವ ಬಗ್ಗೆ ಹೆಚ್ಚುತ್ತಿರುವ ಪ್ರವೃತ್ತಿಯನ್ನು ಪ್ರಕಟಿಸು ತ್ತವೆ. ಸಮಾಜದ ಅಭಿವೃದ್ಧಿಯಲ್ಲಿ ಸಾಹಿತ್ಯದ ಪಾತ್ರದ ಬಗ್ಗೆ ನಿಮ್ಮ ಅಭಿಪ್ರಾಯವೇನು ? ಅದು ಪ್ರಜ್ಞಾಪೂರ್ವಕವಾಗಿ ಸಾಮಾಜಿಕ ವಿಮರ್ಶೆಯಲ್ಲಿ ತೊಡಗಬೇಕೇ? ಹಾಗಿದ್ದಲ್ಲಿ, ಎಷ್ಟರಮಟ್ಟಿಗೆ ?

ಜಯಕಾಂತನ್ : ಸಾಹಿತ್ಯವೂ ಸಾಧ್ಯವಾದಷ್ಟು ಮಟ್ಟಿಗೆ ಸಮಾಜದ ವಿಮರ್ಶೆಯಲ್ಲಿ ತೊಡಗಬೇಕು. ಅದರಲ್ಲಿರುವುದು ಒಳ್ಳೆಯದು ಹಾಗೂ ಕೆಟ್ಟ ಕ್ಷೇತ್ರಗಳೇ ಹೊರತು ಹಳೆಯ ಹಾಗೂ ಹೊಸ ಕ್ಷೇತ್ರಗಳಲ್ಲ. ಮೌಲ್ಯಗಳು ಬದಲಾಗು ತ್ತಿವೆ ; ನಾನು ಅವುಗಳ ಬಗ್ಗೆ ಮತ್ತೆ ಗಮನಿಸಬೇಕು. ಅವುಗಳನ್ನು ಸುಮ್ಮನೆ

ಒಪ್ಪಿಕೊಳ್ಳಲಾಗದು. ನಾನು ಹಳೆಯ ಮತ್ತು ಹೊಸ ಮೌಲ್ಯಗಳನ್ನು ವಿಮರ್ಶಾತ್ಮಕ ದೃಷ್ಟಿಕೋನದಿಂದ ಹಾಗೂ ನನ್ನನ್ನೇ, ನನ್ನ ನಂಬಿಕೆ, ನನ್ನ ಸಂಸ್ಕೃತಿ ಹಾಗೂ ನನ್ನ ಮೂಲಗಳನ್ನು ಮರೆಯದಂತೆ ಪರಿಗಣಿಸಬೇಕು, ಹಾಗಾಗಿ ಹಳೆಯ ಹಾಗೂ ಹೊಸ ಮೌಲ್ಯಗಳೆರಡರ ಬಗ್ಗೆಯೂ ನಾನು ಬಹಳ ವಿಮರ್ಶಾತ್ಮಕವಾಗಿರಬೇಕು.

ರಾಂಗ್ರ : ನಾನು ಮದ್ರಾಸಿಗೆ ಬರುತ್ತಿದ್ದಾಗ, ನಿಮ್ಮ ಅಭಿಮಾನಿಗಳ ಪೈಕಿ ಒಬ್ಬಾತ ನನ್ನ ಜೊತೆ ಪ್ರಯಾಣ ಮಾಡಿದ. ನಿಮ್ಮ ಬರವಣಿಗೆಗಳ ಬಗ್ಗೆ ಆತನೊಡನೆ ಮಾತನಾಡಲಾರಂಭಿಸಿದೆ. ನಮ್ಮ ಮನೆಯಲ್ಲಿಯೂ ನಿಮ್ಮ ಅಭಿಮಾನಿಯೊಬ್ಬರಿದ್ದಾರೆ. ನನ್ನ ಸೊಸೆ ರುಕ್ಮಿಣಿ ತಮಿಳುನಾಡಿನವಳು : ಆಕೆ ನಿಮ್ಮ ಸಣ್ಣಕಥೆಗಳನ್ನು ತುಂಬ ಇಷ್ಟಪಡುತ್ತಾಳೆ. ನಾನು ನಿಮ್ಮನ್ನು ಸಂದರ್ಶಿಸುತ್ತಿರುವುದನ್ನು ತಿಳಿದು ಅವರಿಬ್ಬರೂ ಸಂತೋಷಪಟ್ಟರು. ಜಯಕಾಂತನ್ ಸದಾ ಆವೇಶಪೂರ್ಣ ಎಂಬುದು ಅವರ ಅಭಿಪ್ರಾಯ. ಆ ಆವೇಶ ಈಗ ಎಲ್ಲಿ ಮತ್ತು ಏಕೆ ಹೋಯಿತು ಎಂದು ಕೇಳುವಂತೆ ಹೇಳಿದರು. ಈಚೆಗೆ ನೀವು ರಾಜೀ ಮಾಡಿಕೊಳ್ಳುತ್ತಿದ್ದೀರಿ ಎಂದು ಅವರಿಗೆ ತೋರುತ್ತಿದೆ.

ಜಯಕಾಂತನ್ : ಸಮಾಜದ ಜೊತೆ ರಾಜಿ ಮಾಡಿಕೊಳ್ಳಬೇಕು ಎಂದು ನನಗೆ ತುಂಬ ಅನಿಸಿದೆ; ಆದರೆ ನನಗೂ ಸಮಾಜಕ್ಕೂ ನಡುವೆ ಜನರಿದ್ದಾರೆ; ಭಾವನೆಗಳೂ ಇವೆ; ಅವು ನಾನು ರಾಜಿ ಮಾಡಿಕೊಳ್ಳಲು ಬಿಡುತ್ತಿಲ್ಲ. ನಾವು ಸದಾಕಾಲ ಜಗಳವಾಡಲು ಬಯಸುವುದಿಲ್ಲ. ನಾವೂ ರಾಜಿ ಮಾಡಿಕೊಳ್ಳ ಬಯಸುತ್ತೇವೆ. ನಾನೊಬ್ಬ ಕೋಪಿಷ್ಠ ಮನುಷ್ಯ ಎಂದು ನನ್ನ ಓದುಗರು ಕಲ್ಪಿಸಿಕೊಂಡಿದ್ದಾರೆ. ಈಗ ನನಗೆ ಅಷ್ಟೊಂದು ಕೋಪತಾಪವಿಲ್ಲ. ನಾನು ನನಗಾಗಿ ಎಂದೂ ಕೋಪಿಸಿಕೊಂಡಿಲ್ಲ. ನಾನು ಕೋಪಿಸಿಕೊಳ್ಳುವುದು ಇತರರಿಗಾಗಿ. ಲೇಖಕನ ಬಗ್ಗೆ ಜನರು ಒಂದು ಸಲ ಒಂದು ಚಿತ್ರ ಮೂಡಿಸಿಕೊಂಡರೆಂದರೆ ಸದಾಕಾಲ ಆತ ಅದಕ್ಕೆ ಬದ್ಧನಾಗಿರಬೇಕು ಎಂದು ಬಯಸುತ್ತಾರೆ. ವ್ಯಕ್ತಿ ಬೆಳೆಯುತ್ತಿರುವಂತೆ ಬದಲಾಗುತ್ತಲೂ ಇರುತ್ತಾನೆ ಎಂಬುದನ್ನು ಜನ ಮರೆತುಬಿಡುತ್ತಾರೆ.

ರಾಂಗ್ರ : 'ಒರು ಮನಿದನ್, ಒರು ವೀಡು, ಒರು ಉಲಗಮ್' ಕಾದಂಬರಿಯ ಕೇಂದ್ರವಸ್ತು ಏನು ? ಅದು ಕಥಾನಾಯಕ ಹೆನ್ರಿಯ ಸುತ್ತಲೇ ಹೆಣೆದಿರುವಂಥದು. ಆತ ತನ್ನ ಹಿಂದೂ ತಂದೆ ಮತ್ತು ಕ್ರಿಶ್ಚಿಯನ್ ತಾಯಿಯಿಂದ ಉದಾರದೃಷ್ಟಿಯನ್ನು ಪಡೆದಿರುತ್ತಾನೆ. ಆತನ ಮೇಲೆ ತಮ್ಮ ಧರ್ಮವನ್ನು ಅವರು ಹೇರುವುದಿಲ್ಲ. ನಾನ ಈ ಪ್ರಶ್ನೆ ಕೇಳುವುದಕ್ಕೆ ಕಾರಣ ಅಂತ್ಯದಲ್ಲಿ ಗಮನವೆಲ್ಲ ಇದ್ದಕ್ಕಿದ್ದಂತೆ ಹುಚ್ಚು ಹಿಡುಗಿಯುತ್ತ ಸಾಗುವುದು.

ಜಯಕಾಂತನ್ : ಇದೊಂದು ಸಾಂಕೇತಿಕ ಅಂತ್ಯ. ತಂದೆ-ತಾಯಿಯಿಲ್ಲದ ಅನಾಥ ಹುಡುಗನೊಬ್ಬನ ಕಥೆ ಇದು. ಒಬ್ಬ ಪುರುಷ, ಒಬ್ಬ ಮಹಿಳೆ – ಇವರಿಗೆ ಮದುವೆಯಾಗುವುದರಿಂದ ಗಂಡ-ಹೆಂಡಿರಲ್ಲ– ಇವರು ಆತನನ್ನು ಬೆಳೆಸುತ್ತಾರೆ. ನಮ್ಮ ಧರ್ಮಗಳಿಂದ ವಿಶ್ವಮಾನವನನ್ನು ರೂಪಿಸುವುದು ನನ್ನ ಉದ್ದೇಶ ವಾಗಿತ್ತು. ವಿಶ್ವಮಾನವ ನಮ್ಮ ಗ್ರಾಮಗಳಲ್ಲಿ ಕಂಡುಬರುತ್ತಾನೆ. ಹಳ್ಳಿ ಗಳಲ್ಲಿನ ನಮ್ಮ ಜನರಿಗೆ ಕೋಮು ಭಾವನೆಗಳಿಲ್ಲ. ಈ ಕೇಡು ಈಚಿಗಷ್ಟೇ ಬೆಳೆದುಕೊಂಡಿರುವಂಥದು ; ಬಹುಮಟ್ಟಿಗೆ ಪಟ್ಟಣಗಳಿಂದ ಬಂದು, ಇಂದಿನ ರಾಜಕೀಯ ಒತ್ತಡದಿಂದ ಹುಟ್ಟಿದ್ದು. ಜನರ ಪ್ರಾಮಾಣಿಕತೆಯು ಧರ್ಮ-ಸಿದ್ಧಾಂತ ಇತ್ಯಾದಿಗಳನ್ನು ಮೀರಿರುತ್ತದೆ. ಅವರು ಬಾಳುತ್ತಾರೆ, ಪ್ರೀತಿಸು ತ್ತಾರೆ, ಮದುವೆಯಾಗುತ್ತಾರೆ. ಇವೆಲ್ಲ ನನ್ನನ್ನು ಆ ಕಥೆ ಬರೆಯುವಂತೆ ಮಾಡಿದವು. ಗ್ರಾಮೀಣ ಪರಿಸರವನ್ನು ಕುರಿತು ನಾನು ರಚಿಸಿರುವ ಕಾದಂಬರಿ ಇದೊಂದೇ. ಸನ್ಯಾಸಿಯಂಥ 'ಹುಚ್ಚ'ರೂ ಇದ್ದಾರೆ. ಅವರು ಕೆಟ್ಟ ದೇನನ್ನೂ ಮಾಡುವುದಿಲ್ಲ. ಆದರೆ ಅವರು ಬೇರೆ ರೀತಿಯಲ್ಲಿ ವರ್ತಿಸುವುದ ರಿಂದ ಜನ ಅವರನ್ನು ಹುಚ್ಚರು ಎನ್ನುತ್ತಾರೆ. ಅವರು ಕರ್ಮಗಳನ್ನು ಆಚರಿಸುವುದಿಲ್ಲ. ಈ ವಿಶ್ವಮಾನವ ಹೆನ್ರಿ ಎಲ್ಲರ ಬಗ್ಗೆ ಭ್ರಾತೃವಾತ್ಸಲ್ಯ ಉಳ್ಳವನು. ಎಲ್ಲರಿಗೆಂದು ಒಂದು ಮನೆ ಕಟ್ಟಿಸಿದ. ಈ ಭಾವನೆಗಳು ನಮ್ಮ ಹಳ್ಳಿಯ ಜನರನ್ನು ಸಂಕುಚಿತ ಮನೋಭಾವದಿಂದ ಮುಕ್ತರಾಗುವಂತೆ ಮಾಡುತ್ತದೆ. ಅವರು ವಿಶ್ವಮಾನವರಾಗುತ್ತಾರೆ. ಹಾಗಾಗಿ ಇಂದಿಗೂ ನಮ್ಮ ಹಳ್ಳಿಗಳಲ್ಲಿ ವಿಶ್ವಸಾಮಾನ್ಯತೆ ಅಸ್ತಿತ್ವದಲ್ಲಿದೆ ಎಂಬುದನ್ನು ತೋರಿಸು ವುದೇ ಇದರ ಮುಖ್ಯ ವಸ್ತು.

ರಾಂಗ್ರ : ನಿಮ್ಮ ಕೆಲವು ಕಥೆಗಳ ಬಗ್ಗೆ ಟೀಕೆಗಳು ಬಂದಿವೆ ಎಂದು ಹೇಳಿದ್ದೀರಿ. ಇಂದು ಇರುವಂತೆ ವಿಮರ್ಶೆಯು ಲೇಖಕರಿಗಾಗಲೀ, ಓದುಗರಿಗಾಗಲೀ ಏನಾದರೂ ಮಹತ್ತ್ವದ್ದೆನಿಸುವುದೇ ? ಸಾಮಾನ್ಯವಾಗಿ ವಿಮರ್ಶೆಯ ಬಗ್ಗೆ, ವಿಶೇಷವಾಗಿ ಪ್ರೇರೇಪಿತ ವಿಮರ್ಶೆಯ ಬಗ್ಗೆ, ನಿಮ್ಮ ಮನೋಭಾವವೇನು ?

ಜಯಕಾಂತನ್ : ಅದನ್ನು ನಾನು ಸಾಹಿತ್ಯ ವಿಮರ್ಶೆ ಎನ್ನುವುದೇ ಇಲ್ಲ. ಅದು ಕೇವಲ ಪ್ರೇರೇಪಿತ ಟೀಕೆಯಷ್ಟೇ. ನಿಜವಾದ, ಪ್ರಾಮಾಣಿಕವಾದ ವಿಮರ್ಶೆಯು ಲೇಖಕನಿಗೂ, ಓದುಗನಿಗೂ ನೆರವಾಗುತ್ತದೆ. ಇಬ್ಬರಿಗೂ ಮಾರ್ಗದರ್ಶಕ ವಾಗುತ್ತದೆ. ಆದರೆ ನನ್ನ ಮಟ್ಟಿಗೆ ಹೇಳುವುದಾದರೆ ಈವರೆಗೆ ತಮಿಳಿನಲ್ಲಿ ನಾನು ಗಮನಿಸಿರುವುದು ಕೇವಲ ಪ್ರೇರೇಪಿತ ಟೀಕೆಯೇ. ಪ್ರೇರೇಪಿತ ಟೀಕೆ ಯನ್ನು ನಾನು ಹೇಗೆ ಇಷ್ಟಪಡಲಿ ? ನಾನು ಅದನ್ನು ಸುಮ್ಮನೆ ಅಲಕ್ಷಿಸು ತ್ತೇನೆ.

ರಾಂಗ್ರ : ಲೇಖಕರ ಬದ್ಧತೆಯ ಬಗ್ಗೆ ಈಚಿನ ದಿನಗಳಲ್ಲಿ ನಾವು ತುಂಬ ಕೇಳುತ್ತಿದ್ದೇವೆ. ಪ್ರತಿಯೊಬ್ಬ ಲೇಖಕನೂ ಬದ್ಧ ಲೇಖಕನಾಗಿರಬೇಕು ಎಂಬ ದೃಷ್ಟಿಕೋನವನ್ನು ನೀವು ಒಪ್ಪುತ್ತೀರಾ ? ಹಾಗಾದಲ್ಲಿ ಯಾರಿಗೆ ಬದ್ಧನಾಗಿರಬೇಕು?

ಜಯಕಾಂತನ್ : ಹೌದು, ನಾನು ಈ ಅಭಿಪ್ರಾಯವನ್ನು ಒಪ್ಪುತ್ತೇನೆ. ಲೇಖಕನು ಭಾವನೆಗಳಿಗೆ ಬದ್ಧನಾಗಿರಬೇಕು. ನಾನು ವಿಜ್ಞಾನ, ವೈಜ್ಞಾನಿಕ ಸಮಾಜ ಶಾಸ್ತ್ರಕ್ಕೆ ಬದ್ಧನಾಗಿದ್ದೇನೆ - ಎಂದು ಹೇಳಬಲ್ಲೆ. ಜೊತೆಗೆ ಒಬ್ಬನು ಶೈವ ಧರ್ಮ, ವೈಷ್ಣವಧರ್ಮ, ಮಾರ್ಕ್ಸ್‌ವಾದ ಅಥವಾ ಸಮತಾವಾದಕ್ಕೆ ಬದ್ಧನಾಗಿರಬಹುದು. ಪ್ರಜ್ಞಾಮಟ್ಟದಲ್ಲಿ ಜೀವನಕ್ಕೆ ಬದ್ಧನಾಗಿರಬೇಕು. ಆದರೆ ಲೇಖಕನಾಗಿ ಆತ ಬದ್ಧನಾದ ವ್ಯಕ್ತಿಯಾಗಿರಬೇಕು ಮತ್ತು ಲೇಖನ ಹಂತದಲ್ಲಿ ಸಂಪೂರ್ಣವಾಗಿ ಬದ್ಧನಾಗಿರಬೇಕು.

# ಈ ವರ್ಷದ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ ತೆಲುಗು ಕವಿ ಶಿವಾರೆಡ್ಡಿ

ತೆಲುಗು ಮೂಲ : ಕೆ. ಶ್ರೀನಿವಾಸ್
ಕನ್ನಡಕ್ಕೆ : ಆರ್ವಿಯಸ್. ಸುಂದರಂ

ಹೈದರಾಬಾದಿನ ಲಕಡೀ ಕಾ ಪೂಲ್‌ನಲ್ಲಿರುವ ದ್ವಾರಕಾ ಹೋಟೇಲಿನಲ್ಲಿ ಪ್ರತಿ ಸಂಜೆ ಕವಿಗಳ ಓಲಗ ನಡೆಯುತ್ತದೆ. ಕಾವ್ಯದ ಬಗ್ಗೆ ಆಸಕ್ತಿ, ಜನರ ಬಗೆಗೆ ಕಳಕಳಿ ಇದ್ದರೆ ಸಾಕು ಅಲ್ಲಿ ಸಜ್ಜನ ಸಾಂಗತ್ಯ ಸಿಗುತ್ತದೆ. ಪ್ರಸ್ತುತ ಕಾವ್ಯವನ್ನು ಕುರಿತು ಬಿಸಿ ಬಿಸಿ ಚರ್ಚೆ, ಸ್ವರಚಿತ ಕವನ ವಾಚನ, ಆಗಾಗ್ಗೆ ಬಿಸಿ ಕಾಫಿ, ಹೊರಗಿನಿಂದ ಬಂದ ಗೆಳೆಯರನ್ನು ಕೇಳುವ ಕ್ಷೇಮ ಸಮಾಚಾರ – ಇದು ಅಲ್ಲಿಯ ವಾತಾವರಣ.

ಜುಬ್ಬ, ಪ್ಯಾಂಟು, ಇಳಿಬಿಟ್ಟ ಕೂದಲಿನೊಂದಿಗೆ ಅಪ್ಪಟ ಕವಿಯಾಗಿ ಕಾಣುವ ಶಿವಾರೆಡ್ಡಿ, ದ್ವಾರಕೆಯ ಸಂಜೆಗಳಲ್ಲಿ ಮಾತ್ರವಲ್ಲ, ಪ್ರತಿಯೊಂದು ಸಾಹಿತ್ಯ ಸಂಜೆಯಲ್ಲೂ ಕಾಣಸಿಗುತ್ತಾರೆ. ಯಾವಾಗಲೂ ಅವರ ಮಾತು ಕೇಳಿಸುತ್ತಲೇ ಇರುತ್ತದೆ. ಹುಡುಗರೊಂದಿಗೆ ಕೈ ಕೈ ಹಿಡಿದೇ ಹೋಗುತ್ತಿರುತ್ತಾರೆ. ಅವರಿಗೆ 47 ವರ್ಷ ಎಂದರೆ ನಂಬುವುದು ಕಷ್ಟ.

ಆತ್ಮೀಯತೆ ಅವರ ಜೀವಲಕ್ಷಣ, 'ಮೋಹನಾ ಓ ಮೋಹನಾ' ಎಂಬ ಕವನ ಸಂಕಲನದಲ್ಲಿ ಅವರೇ ಹೇಳಿಕೊಂಡಿರುವಂತೆ ಅವರಿಗೆ ಅತ್ಯಂತ ಹತ್ತಿರದ ಮಿತ್ರರು, ಅತ್ಯಂತ ಹತ್ತಿರದ ಶತ್ರುಗಳೂ ಇದ್ದಾರೆ. ಮಾನವ ಸಂಬಂಧಗಳಲ್ಲಿ ಮಾನವೀಯತೆಗೆ ಅವರು ಪ್ರಾಧಾನ್ಯ ನೀಡುತ್ತಾರೆ. ಅವರ ಕಾವ್ಯ ತೀವ್ರತರ ರಾಗದ್ವೇಷಗಳಿಂದ ತುಂಬಿ ತುಳುಕಾಡುತ್ತಿರುತ್ತದೆ. "ಯಾವುದನ್ನೂ ಧ್ವಂಸ ಮಾಡದೆ ಏನನ್ನು ನಿರ್ಮಿಸಲು ಸಾಧ್ಯ?" ಎಂದು ಪ್ರಶ್ನಿಸುತ್ತಾರೆ. ಯಾರ ಕಣ್ಣಲ್ಲಾದರೂ ಉರಿಯಿಲ್ಲದ ದುಃಖ ಕಾಣಿಸಿದರೆ, ಯಾರಾದರೂ ಕಾವ್ಯವನ್ನು ಜೋಳಿಗೆ ಮಾಡಿಕೊಂಡು ತಿರುಪೆ ಬೇಡುವರೆ ಶಿವಾರೆಡ್ಡಿಗೆ ಅಸಹ್ಯ. ಭ್ರಷ್ಟ ಕವಿಗಳ ಬಗ್ಗೆ ಅಸಹ್ಯಪಡುತ್ತಾ ಮರಣವನ್ನು ಲೆಕ್ಕಿಸದ ವೀರ ಕವಿಗಳ ಹಾಡನ್ನೂ ಮಾತನ್ನೂ ವಿನಯದಿಂದ ಗೌರವಿಸುತ್ತಾರೆ. ಎಲ್ಲಿ ಹೆಮ್ಮೆ ಪಡಬೇಕು, ಎಲ್ಲಿ ತಲೆತಗ್ಗಿಸಬೇಕು ಎಂಬುದು ಅವರಿಗೆ ಗೊತ್ತು.

ಕಳೆದ ಇಪ್ಪತ್ತು ವರ್ಷದ ತೆಲುಗು ವಚನಕಾವ್ಯ ಇತಿಹಾಸದಲ್ಲಿ ಶಿವಾರೆಡ್ಡಿ ಹಲವು ಪುಟಗಳನ್ನು ತಮ್ಮದಾಗಿಸಿಕೊಂಡಿದ್ದಾರೆ. ಇವರಿಗೆ ಪ್ರಗತಿಶೀಲ ಸಾಹಿತ್ಯ ಚಳವಳಿಯಿಂದಲೇ ಪ್ರಾಣವಾಯು ಬಂತು. ಕ್ರಾಂತಿಯ ಸೂರ್ಯಕಾಂತಿಯಿಂದಲೇ ಶಿವಾರೆಡ್ಡಿಯ ಕಾವ್ಯ ಪತ್ರ ಹರಿತವಾಗುತ್ತಿದೆ. ಯಾವ ಲೇಖಕರ ಸಂಘದಲ್ಲೂ ಅವರು ಸದಸ್ಯರಲ್ಲ. ಆದರೆ ತಮ್ಮ ಅಭಿಮಾನವನ್ನು ಅವರೆಂದೂ ಬಚ್ಚಿಟ್ಟವರಲ್ಲ. ನಿರ್ದಿಷ್ಟ ಸಾಹಿತ್ಯಚಳವಳಿಯಲ್ಲಿ ಪ್ರತ್ಯಕ್ಷವಾಗಿ ಪಾಲ್ಗೊಳ್ಳದಿರುವುದನ್ನು ಅವರೆಂದೂ ತಮ್ಮ ಅನುಕೂಲಕ್ಕೆ ಬಳಸಿಕೊಂಡಿಲ್ಲ. ವೈವಿಧ್ಯ ತೋರಿಸಿದರೇ ಹೊರತು ಭಾವವೈರುಧ್ಯ ತೋರಿಸಿಲ್ಲ. ಕ್ರಾಂತಿಯ ಚಳವಳಿಗೆ ತಾವೆಷ್ಟು ಸ್ವೀಕರಿಸಿದರೋ ಅಷ್ಟನ್ನೇ ಆ ಚಳವಳಿಗೆ ನೀಡಿದರು. 1977ರ ಅನಂತರದ ಕವಿತಲೆಮಾರೆಲ್ಲ ಶಿವಾರೆಡ್ಡಿಯ ಪ್ರಭಾವವನ್ನು ಸೀಳಿಕೊಂಡು ಬರಬೇಕಷ್ಟೆ. ಅಷ್ಟೇ ಅಲ್ಲ, ಸೀನಿಯರ್ ಕವಿಗಳೂ ಶಿವಾರೆಡ್ಡಿ ಧೋರಣೆಯ ಪ್ರಲೋಭನೆಗೆ ಒಳಗಾಗುತ್ತಾರೆ.

ಗುಂಟೂರು ಜಿಲ್ಲೆಯ ಒಂದು ಸಣ್ಣ ಹಳ್ಳಿಯಲ್ಲಿ ಹುಟ್ಟಿ ಹೈದರಾಬಾದ್ ಮಹಾನಗರಕ್ಕೆ ಪ್ರವಹಿಸಿದ ಶಿವಾರೆಡ್ಡಿಯ ಜೀವನದಿಂದ ಹಳ್ಳಿಯ ಹೃದಯವಂತಿಕೆ, ನಗರದ ಕೃತಕತೆ ಅವರ ಕಾವ್ಯದಲ್ಲೇ ಸಮಾವೇಶಗೊಂಡವು. ಆಂಧ್ರದ ಕರಾವಳಿಯ ಮಧ್ಯಮವರ್ಗದ ರೈತ ಕುಟುಂಬದಲ್ಲಿ ಹುಟ್ಟಿ ನಗರದ ಮಧ್ಯಮವರ್ಗಕ್ಕೆ ಪರಿವರ್ತನೆಯಾದ ನೇಪಥ್ಯ ಶಿವಾರೆಡ್ಡಿಯ ಕಾವ್ಯದಲ್ಲಿ ಸ್ಪಷ್ಟವಾಗಿ ಕಾಣಿಸುತ್ತದೆ. ತೆನಾಲಿ ತಾಲ್ಲೂಕಿನ ಕಾರುಮ್ಮರಿವಾರಿಪಾಳೆಂನಲ್ಲಿ 1943 ಆಗಸ್ಟ್ ಆರರಂದು ಶಿವಾರೆಡ್ಡಿ ಜನಿಸಿದರು. ಪ್ರತಿದಿನ ಎಂಟು ಮೈಲು ನಡೆದು ಕೂಚಿಪೂಡಿ ಹೈಸ್ಕೂಲಲ್ಲಿ ಎಸ್.ಎಸ್.ಎಲ್.ಸಿ. ಓದಿದರು. ಅನಂತರ ತೆನಾಲಿ ವಿ.ಎಸ್.ಆರ್. ಡಿಗ್ರಿ ಕಾಲೇಜಿನಲ್ಲಿ ಪಿ.ಯು.ಸಿ., ಡಿಗ್ರಿ, ಆಂಧ್ರ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಎಂ.ಎ. – ಆಮೇಲೆ ಉದ್ಯೋಗವನ್ನರಸಿ ದೂರದ ಹೈದರಾಬಾದಿಗೆ. ಈಗ ವಿವೇಕವರ್ಧಿನಿ ಸಂಜೆ ಕಾಲೇಜಿನಲ್ಲಿ ಇಂಗ್ಲಿಷ್ ಲೆಕ್ಚರರ್.

ಶಿವಾರೆಡ್ಡಿಯಿಂದ ತರುಣ ಕವಿಗಳು ಕಲಿಯಬೇಕಾಗಿರುವುವು ಹಲವಿದೆ. ಕಲಿಯಬಾರದಂಥವೂ ಕೆಲವಿದೆ. ರಮ್ಯಕಾವ್ಯದ ದೋಷಗಳೆಂದು ಅಕ್ಕಿರಾಜು ಉಮಾಕಾನ್ತಂ ಎಂಬವರು ಹೇಳಿದ 'ನಿದರ್ಶನ ಪರಂಪರೆ'ಯ ಪ್ರತೀಕಗಳ ಬಾಹುಳ್ಯ ಶಿವಾರೆಡ್ಡಿಯಲ್ಲಿ ಕಾಣಿಸುತ್ತದೆ. ಶಿವಾರೆಡ್ಡಿ ಕಾವ್ಯದಲ್ಲಿಯ 'ಅಸೌಕರ್ಯ' ಏನೆಂದು ಯಾರೂ ಖಚಿತವಾಗಿ ಸೂತ್ರೀಕರಿಸಿ ಹೇಳದಿದ್ದರೂ ಅದಕ್ಕೆ ಅಸ್ಪಷ್ಟತೆ ಎಂದೋ ಸಂಕ್ಲಿಷ್ಟತೆ ಎಂದೋ ಹೆಸರಿಡಲಾಗಿದೆ. ತನ್ನ ಶಿಲ್ಪವನ್ನು ಸಮರ್ಥಿಸಿಕೊಳ್ಳಲು ಶಿವಾರೆಡ್ಡಿ 'ನಗರಜೀವನದ ಸಂಕ್ಲಿಷ್ಟತೆ' ಎಂದು ಹೇಳಿಕೊಂಡರು. "ನಮಗೆ ಮಹಾನಗರಗಳಿವೆಯೋ? ಪರಾಶ್ರಯತೆ ನಮ್ಮ ಕವಿಗಳ ಅನುಭವಕ್ಕೆ ಬರುತ್ತದೆಯೇ? ಅಥವಾ ಅಮದಾಗು ಎಂಬ ಚರ್ಚೆಗಳು ಹುಟ್ಟಿಕೊಂಡವು. 'ಅರ್ಬೇನಿಟಿ' ಶಿವಾರೆಡ್ಡಿ ಹೇಳುತ್ತಿರುವ ನಾಗರಿಕ ಸಂಕ್ಲಿಷ್ಟತೆಯ 'ಅರ್ಬೇನಿಟಿ' ಅಲ್ಲ. ಸ್ಥೂಲವಾಗಿ ಹೇಳ

ಬೇಕಾದರೆ 'ಆಸುಪತ್ರಿಗೀತಂ' ಎಂಬ ಕಾವ್ಯದ ತನಕ ಶಿವಾರೆಡ್ಡಿಯ ಕಾವ್ಯದಲ್ಲಿ ಕಾಣಿಸಿದ ಸರಳತೆ ಆಮೇಲೆ ಕಡಿಮೆ ಆಯಿತು. ಗಾಢತೆ ಹೆಚ್ಚಾಗಿ ಕಾಣಿಸಲಾರಂಭಿಸಿತು. ರಮ್ಯಕಾವ್ಯದ ಕಾಠಿಣ್ಯ ಶಿವಾರೆಡ್ಡಿಯಲ್ಲಿ ಕಾಣಿಸುತ್ತದೆ. ರೈತಕುಟುಂಬದ ಹಿನ್ನೆಲೆ ಇದಕ್ಕೆ ಕಾರಣವೇ ಎಂಬುದನ್ನು ಪರಿಶೀಲಿಸಬೇಕು. ಆದರೆ ಪ್ರವಾಹವೇಗ, ಆವೇಶ ತೀವ್ರತೆ ಇರುವ ಕವನಗಳನ್ನು ಈಗಲೂ ಶಿವಾರೆಡ್ಡಿ ಬರೆಯುತ್ತಿದ್ದಾರೆ.

ಶಿವಾರೆಡ್ಡಿಯ ಕಾವ್ಯದ ಕಾಠಿಣ್ಯವನ್ನು ಟೀಕಿಸುವವರಲ್ಲಿ ಪ್ರಗತಿಶೀಲ ಕಾವ್ಯಾಭಿಮಾನಿಗಳು, ಶಿವಾರೆಡ್ಡಿ ಅವರ ಶ್ರೇಯೋಭಿಲಾಷಿಗಳೊಂದಿಗೆ ಇನ್ನೊಂದು ರೀತಿಯವರೂ ಇದ್ದಾರೆ. ಅವರು ಅಸ್ಪಷ್ಟತೆ, ಸಂಕ್ಲಿಷ್ಟತೆ ಸಹಜವಾದವೆಂದು ಸಿದ್ಧಾಂತ ಮಾಡುತ್ತಾ ಇನ್ನೊಂದು ಕಡೆ ಶಿವಾರೆಡ್ಡಿಯ ಕಾವ್ಯಧೋರಣೆಯನ್ನು ಟೀಕಿಸುತ್ತಾರೆ. ಅವರಿಗೆ ಶಿವಾರೆಡ್ಡಿ ಕಾವ್ಯದ ಸಾರ ಅರ್ಥವಾಗುವುದಿಲ್ಲ. ಶಿವಾರೆಡ್ಡಿಯೇನಾದರೂ ಜನಪಕ್ಷಪಾತಕ್ಕೆ ಗುಡ್‌ಬೈ ಹೇಳಿದರೆ ಅವರು ಹಿಗ್ಗಿ ಕುಣಿಯುತ್ತಾರೆ.

ಕವಿ ಶಿವಾರೆಡ್ಡಿಯನ್ನು ಕುರಿತು ಈಗ ಹೊಸದಾಗಿ ಹೇಳಬೇಕಾದ ಅವಶ್ಯಕತೆಯಿಲ್ಲ. ಅವರು ಸವೆದುಹೋದ ಕವಿ ಅಥವಾ ನಿಂತುಹೋದ ಕವಿಯಲ್ಲ. ಶಿವಾರೆಡ್ಡಿ ಏನೆಂದು ಅವರ ಕಾವ್ಯವೇ ಹೇಳುತ್ತದೆ. ಕವಿಯಾಗಿ ಅವರು ಜೀವನದಿ. ಅವರು ಕಾವ್ಯವನ್ನು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಾರೆ. ಮನುಷ್ಯರನ್ನೂ ಪ್ರಾಣದಂತೆ ಪ್ರೀತಿಸುತ್ತಾರೆ. ಸ್ಥೂಲವಾಗಿ ಅವರ ಕಾವ್ಯ ಈ ಎರಡೂ ಗುಣಗಳ ಸಮಾಹಾರ.

ಯಾವ ಔನ್ನತ್ಯಕ್ಕೂ ಪುರಸ್ಕಾರ ಒರೆಗಲ್ಲಲ್ಲ. ಶಿವಾರೆಡ್ಡಿಯ ವಿಷಯದಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊಡ್ಡ ಸಂದರ್ಭವೂ ಅಲ್ಲ. ಆಧುನಿಕ ತೆಲುಗು ಕಾವ್ಯದಲ್ಲಿ ಇಂದಿಗಾಗಲೇ ಶಿವಾರೆಡ್ಡಿಯ ಸ್ಥಾನವೇನೆಂದು ನಿರ್ಧಾರವಾಗಿಬಿಟ್ಟಿದೆ. ಇನ್ನು ನಾಳೆಯ ವಿಷಯ —

ದೇವೀಪ್ರಿಯ ಎಂಬ ಕವಿಯನ್ನು ಉದ್ದೇಶಿಸಿ ಶಿವಾರೆಡ್ಡಿ ಬರೆದಂತೆ !

"ಹಸಿವಿದೆಯಾದರೂ ಅವನು ಆರಿಹೋಗುವುದಿಲ್ಲ
ಹೋರಾಟವಿದೆಯಾದರೂ ಅವನು ಸೋಲುವುದಿಲ್ಲ."

---

['ಉದಯಂ' ಪತ್ರಿಕೆಯ ಭಾನುವಾರದ ಸಂಚಿಕೆಯ ಕೃಪೆಯಿಂದ)

# ನೋಟ

ತೆಲುಗು ಮೂಲ : ಕೆ. ಶಿವಾರೆಡ್ಡಿ
ಕನ್ನಡಕ್ಕೆ : ಆರ್ವಿಯಸ್. ಸುಂದರಂ

ಎಲೆಗಳಲ್ಲಿ ಗಗನವನ್ನು
ಗಗನದಲ್ಲಿ ಅಡವಿಗಳನ್ನು ನೋಡಲಾರದವನು
ಮನುಷ್ಯರಲ್ಲಿ ಮಹತ್ತರ ಆಕಾಶದ ಅಡವೀ ಸೌಂದರ್ಯವನ್ನು ನೋಡಲಾರ
ರಸ್ತೆಯಲ್ಲಿ ನದಿಗಳನ್ನು
ನದಿಗಳಲ್ಲಿ ನವಚೈತ್ರ ಮಾರ್ಗಗಳನ್ನು ನೋಡಲಾರದವನು
ಮನುಷ್ಯರಲ್ಲಿ ಹೊಚ್ಚಹೊಸ ಆಶಾವಸಂತೋತ್ಸವವನ್ನು ನೋಡಲಾರ
ಚೂಪಾದ ಹುಲ್ಲುಕಡ್ಡಿಯಲ್ಲಿ ಬಾಕುವನ್ನು
ಕರಿಮೋಡದ ರವಿಕೆಯ ಹಿಂದೆ ರವಿಸ್ತನವನ್ನು ನೋಡಲಾರದವನು
ಮನುಷ್ಯರಲ್ಲಿ ಬಂಡಾಯದ ಬೆಳಗಿನ ಜಾವಗಳನ್ನು ನೋಡಲಾರ
ಅಂಥವನಿಗೆ
ನಾಯಿಮರಿ ನಾಯಿಮರಿಯೇ
ನನಗೆ ಅನಂತ ಆರ್ತನಾದ
ಅವನಿಗೆ
ಗುಲಾಬಿ ಗುಲಾಬಿಯೇ
ನನಗೆ ಗುಲಾಬಿ ಹೂಡಿದ ಬಿಲ್ಲು
ಅವನಿಗೆ
ಮಣ್ಣು ಮಣ್ಣೇ
ನನಗೆ ಮಣ್ಣು ಕಾವ್ಯ!

## ಕರಿಹುಡುಗಿ

ಕಾಣದ ರವಿಕಿರಣ
ದೃಶ್ಯಾದೃಶ್ಯವಾಗಿ ಮಂಜಿನಮೇಲೆ ಇತಿಹಾಸ ಬರೆಯುವಾಗ
ಬೆಚ್ಚನೆಯ ಚಳಿಯೊಂದು ಎಲ್ಲಕಡೆ ಸೇತಾಡುವಾಗ
ದೂರದಲಿ ಮನುಷ್ಯರು ಬಿಳಿನೆರಳುಗಳಾಗಿ ಉಳಿದಾಗ
ಕರಿಹುಡುಗಿಯ
ಕಣ್ಗತ್ತಿಗಳು ನನ್ನ ಮುಂದೆ ಮಿಂಚಿದುವು.
ಅಪರಿಚಿತ ಮಂಜು–ಸರಿಯಾಗಿ ಕಾಣಬಿಡುವುದಿಲ್ಲ
ಕಿವಿಗಳಿಗೆ ಎರಡು ಸೂರ್ಯಚಕ್ರ ಹಾಕಿಕೊಂಡು
ಕೊರಳಿಗೆ ಭೂಗೋಳವೊಂದ ನೇಣುಹಾಕಿಕೊಂಡು
ಉಗುರಿನ ಕೊನೆಯಲ್ಲಿ ಕೆಂಪುದಾರಿ ಅರಳುತ್ತಿರುವಾಗ
ಕಪ್ಪನೆಯ ಕರಿಹುಡುಗಿಯ ಕಗ್ಗಪ್ಪಿನ ಜುಟ್ಟು ನನ್ನ ಮುಂದೆ
ದಾಟಲಾಗದ ಮಹಾನದಿ
ಕರಿಹುಡುಗಿಯ ನೀಲದೇಹದ ಕಡಲ ಆಳಗಳು
ಹಡಗನ್ನು ತಿಂದುವೋ ದೋಣಿಯನ್ನು ನುಂಗಿದುವೋ
ಬೆಳಗ್ಗೆ ಚಿಕ್ಕಬಲೆ ಹೆಗಲಮೇಲೆ ಹಾಕಿಕೊಂಡು
ಹೊರಟ ನನ್ನ ಅಪರಿಚಿತ ಕೈಯ ವಾಕ್ಯವನ್ನು
ಶಾಸನಲಿಪಿಯ ನೋಡುತ್ತಿದ್ದಂತೆ –
ತುಟಿಯ ಅಂಚಿನ ಮೇಲೆ ಬಿಳಿನೊರೆ ನಗುವುದು
ಶಾಲೆಯ ಹುಡುಗನೊಬ್ಬ
ನಾಲ್ಕೈದು ಕಿರಣಗಳನ್ನು ಚೀಲದಲ್ಲಿ ಹಾಕಿಕೊಂಡು
ಮಧ್ಯದಲ್ಲಿ ಬಂದು ಹೋಗುತ್ತಾನೆ
ಕನ್ನಡಿಯ ಮೇಲೆ ತುಂಬಿಕೊಂಡ ಧೂಳಿನಲ್ಲಿ
ಅದಕ್ಕೆ ಮುಂಚೆ ಯಾರೋ ಹುಚ್ಚುಹುಚ್ಚಾಗಿ ಬರೆದ ಹೆಸರುಗಳು
ಈಗ ಎಲ್ಲಾ ಅಂಟಿಕೊಂಡು
ಅಸ್ಪಷ್ಟವಾಗಿ ಹೆಣೆದುಕೊಂಡ ನೋಟದಂತೆ
ಒಂದು ನಿರಾಕಾರದ ಚಲನದಂತೆ –
ಬಾಗಿಲುಗಳಲ್ಲಿ ತುಂಬಿದ ಎಲೆ ಬಾಡಿದ ಹೂವು
ಗೋಡೆಯ ಪಕ್ಕದಲ್ಲಿ ಧೂಳಿನಲ್ಲಿ ಮಿಂಚುತ್ತಿರುವ ಗೋಲಿ
ನಾಲ್ಕೈದು ನಾಯಿಯ ಹೆಜ್ಜೆಗಳು –
ಕನ್ನಡಿಯ ತುಂಬ ಧೂಳು
ಮತ್ತೆ ಕರಿಹುಡುಗಿಯ ಬೆರಳಮುಳ್ಳು ಚುಚ್ಚುವುದು.

# ಅಮ್ಮಾ, ನಿನಗೆ ವಂದಿಸುವೆ !

ತೆಲುಗು ಮೂಲ : ಕೆ. ಶಿವಾರೆಡ್ಡಿ
ಕನ್ನಡಕ್ಕೆ : ಘಟ್ಟಮರಾಜು

ಅಮ್ಮಾ, ನಿನಗೆ ವಂದನೆಗಳು
ನನಗೆ ಜನ್ಮ ನೀಡಿದ್ದಕ್ಕಾಗಿ
ಜನ್ಮ ಕೊಟ್ಟು, ಮುಳ್ಳಿನ ಹಾಸಿಗೆಗೆ ದೂಡಿದ್ದಕ್ಕಾಗಿ
ಅಮ್ಮಾ, ನಿನಗೆ ನಮಸ್ಕರಿಸುವೆ
ನನ್ನ ತಲೆಕಡಿದು ಈ ಕಲ್ಲುಗಳ ಮಧ್ಯೆ ಬಿಸಾಡಿದ್ದಕ್ಕಾಗಿ
ಅಮ್ಮಾ, ನಿನಗೆ ಅನಂತಾನಂತ ವಂದನೆಗಳು
ನನ್ನನ್ನು ಹೆಣವಾಗಿ ಹುಟ್ಟಿಸದೇ ಇರುವುದಕ್ಕೆ
ನನ್ನನ್ನು ಹೆಣವಾಗಿ ಹುಟ್ಟಿಸದೇ ಇರುವುದಕ್ಕೆ
ನದಿಯಾಗಿ ಜನ್ಮ ನೀಡಿದ್ದಕ್ಕಾಗಿ
ಕಾಡಾಗಿ ಪ್ರಸವಿಸಿದ್ದಕ್ಕಾಗಿ
ವೀರರ ರಕ್ತದಲ್ಲಿ ನೆನೆದು ಫಲವತ್ತಾದ
ರಕ್ತಾರುಣ ಧರಣೀಕೇಂದ್ರವಾಗಿ ಮಾಡಿದ್ದಕ್ಕಾಗಿ....
ಅಮ್ಮಾ, ನಿನಗೆ ವಂದನೆಗಳು
ನನಗೆ ಜನ್ಮ ನೀಡಿದ್ದಕ್ಕಾಗಿ
ಜನ್ಮಕೊಟ್ಟು ನನ್ನ ಈ ಜನರ ಮಧ್ಯೆ ದೂಡಿದ್ದಕ್ಕಾಗಿ.

# ಎಲಿಜಿ

ತೆಲುಗು ಮೂಲ : ಕೆ. ಶಿವಾರೆಡ್ಡಿ
ಕನ್ನಡಕ್ಕೆ : ಆರ್ಡಿಯಸ್. ಸುಂದರಂ

ಕೋಣೆಯಲ್ಲಿ ಮಲಗಿ ರಿಟ್ಸಾಸನನ್ನು ಬಾಲ್ಯಸ್ಮೃತಿಗಳನ್ನು
ಬಂಧನಗಳನ್ನು ಓದುತ್ತಿದ್ದಾಗ
ರಸ್ತೆಯ ಮೇಲೆ ಬೇಗ ಬೇಗ ನಡೆಯುತ್ತಿರುವ ಹೆಜ್ಜೆಯ ಆತಂಕದ ಸದ್ದು
ಸದ್ಯದಲ್ಲೇ ಸೀರೆಯ ನೆರಿಗೆ ಸಂಕೋಲೆಯಂತೆ ಕಾಲಿಗೆ ತಗುಲುವುದು
ನಿಜವಾಗಿಯೂ ಇನ್ನೊಂದು ಪ್ರಪಂಚಯುದ್ಧ ಬೇಕಾಗಿಲ್ಲ
ಇರುವ ಸ್ಥಿತಿ ತಂದುಕೊಟ್ಟ ದುರ್ಮಾರ್ಗ ಸಾಕು.
ನಾಲ್ವರ ನಡುವೆ ಒಬ್ಬಂಟಿಗನಾಗಿ –
ಅಸ್ಥಿರತ್ವದ ಅವ್ಯಕ್ತಿತ್ವದ ದ್ವೀಪಾಂತರ ಜೈಲು ಶಿಕ್ಷೆ
ಉಸಿರಾಡದ ಅಪನಂಬಿಕೆಯ ವಾತಾವರಣ
ಪಕ್ಕದಲ್ಲೇ ನಿದ್ದೆಮಾಡುತ್ತಿರುವ ಮಕ್ಕಳ ಮುಖದ ಮೇಲೆ
ಕಾರ್ಮೋಡಗಳ ನೆರಳು
ಕಾಣದ ಜಡಿಮಳೆ ಎಂದೆಂದಿಗೂ ಮನಸ್ಸಿನಲ್ಲಿ ಸುರಿಯುತ್ತಿರುವುದು
ಒಂದು ಅನಿಶ್ಚಿತ ವಾತಾವರಣ ; ಮಾತೆಲ್ಲ ನಿಸ್ಸಹಾಯಕವಾಗಿ
ಬಣ್ಣದ ಮುಖವೆಲ್ಲ ಬಿಳಿಚಿಕೊಂಡು
ಅವ್ಯಕ್ತೀಕರಣದಲ್ಲಿ ಸುತ್ತ ಸಪ್ಪೆಯಾದ ಪ್ರಕೃತಿಯ ಮುಖ
ಸೀರೆ, ಪಂಚೆ, ಪ್ಯಾಂಟ್ ಸಂಕೋಲೆಗಳಾಗಿ ಕಾಲಿಗೆ ಅಡ್ಡ
ಬರುತ್ತಿದ್ದರೆ
ಅಗ್ಗಹದ ಸ್ವಗೃಹದತ್ತ ನಾವೆಲ್ಲ ಬೇಗ ಬೇಗನೆ –
ವ್ಯವಸ್ಥೀಕೃತ ಕ್ರೂರತೆಗೆ ಬಲಿಯಾದ ನಾವು
ಜೀವನವೆಂಬ ಎಲಿಜಿಯನ್ನು ಹೊತ್ತು ತಿರುಗಾಡಬೇಕಷ್ಟೆ.

# ಆಕ್ಟೋವಿಯೊ ಪಾಜ್

ವೆಂಕಟಾಚಲ ಹೆಗ್ಡೆ

"ಜೀವನದಲ್ಲಿ ಕಾವ್ಯವನ್ನು ತುಂಬುವ ಯತ್ನ ನಡೆಸುವ ಬದಲು ಕಾವ್ಯಮಯ ಜೀವನವನ್ನೇ ನಡೆಸಲು ಯಾಕೆ ಯತ್ನಿಸಬಾರದು ?" ಹೀಗೆಂದು ನುಡಿದವರು ಈ ವರ್ಷದ ನೊಬೆಲ್ ಸಾಹಿತ್ಯ ಪ್ರಶಸ್ತಿ ವಿಜೇತ ಮೆಕ್ಸಿಕನ್ ಕವಿ ಆಕ್ಟೋವಿಯಾ ಪಾಜ್. ಬದುಕಿನ ಕ್ರಿಯೆಯಲ್ಲಿ, ಮಾನವೀಯ ಘನತೆ, ಸ್ವಾತಂತ್ರ್ಯ ಹಾಗೂ ಪ್ರೇಮ–ಪ್ರೀತಿ ಗಳಲ್ಲಿ ತೀವ್ರವಾಗಿ ತೊಡಗಿಸಿಕೊಂಡ ಈತ ಹುಟ್ಟಿದ್ದು ದಕ್ಷಿಣ ಅಮೆರಿಕೆಯ ಮೆಕ್ಸಿಕೊ ನಗರದಲ್ಲಿ (1914). ವಿದೇಶ ಸೇವೆಯಲ್ಲಿ ಇದ್ದ ಇವರು 1962 ರಿಂದ 1968ರ ವರೆಗೆ ಭಾರತದಲ್ಲಿ ಮೆಕ್ಸಿಕೊದ ರಾಯಭಾರಿಯಾಗಿದ್ದರು. ಆ ವೇಳೆಯಲ್ಲಿ ಭಾರತೀಯ ಸಂಸ್ಕೃತಿಯತ್ತ ಒಲವು ಮೂಡಿ, ಪೌರ್ವಾತ್ಯ ಕಲೆ ಮತ್ತು ತತ್ತ್ವಜ್ಞಾನವನ್ನು ಅಭ್ಯಾಸ ಮಾಡಿದರು. ಇವರ ಎಷ್ಟೋ ಕವಿತೆಗಳಲ್ಲಿ ಇದರ ಛಾಯೆಯನ್ನು ಕಾಣ ಬಹುದು. 1968ರಲ್ಲಿ, ಮೆಕ್ಸಿಕೊ ಒಲಂಪಿಕ್ ಪಂದ್ಯಗಳ ಮುಂಚೆ ತನ್ನ ಸರಕಾರದ ದಮನ ನೀತಿಯನ್ನು ಪ್ರತಿಭಟಿಸಿ ಕೆಲಸಕ್ಕೆ ರಾಜೀನಾಮೆ ನೀಡಿದ ನಂತರ ವಿಶ್ವದ ಬೇರೆ ಬೇರೆ ಪ್ರಖ್ಯಾತ ವಿಶ್ವವಿದ್ಯಾಲಯಗಳಲ್ಲಿ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತ, ಬರವಣಿಗೆಯಲ್ಲಿ ತನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಂಡರು. ಎಪ್ಪತ್ತಾರರ ಇಳಿ ವಯಸ್ಸಿನಲ್ಲೂ ಸಾಹಿತ್ಯ ಕೃಷಿಯಲ್ಲಿ ತೊಡಗಿರುವ ಇವರು ಮೆಕ್ಸಿಕೋ ನಗರದಲ್ಲಿ ವಾಸ ವಾಗಿದ್ದಾರೆ. ಮೆಕ್ಸಿಕೊದ ಜನಜೀವನವನ್ನು ಗಾಢವಾಗಿ ಚಿತ್ರಿಸುವ 'ದಿ ಲೆಬರಿನ್ತ ಆಫ್ ಸಾಲಿಟ್ಯೂಡ್' ಇವರ ಪ್ರಸಿದ್ಧ ಕೃತಿಗಳಲ್ಲೊಂದು. ಸರ್ರಿಯಲಿಸ್ಟ್ ಚಳವಳಿ ಯಿಂದ ಪ್ರಭಾವಿತವಾದ ಈ ಕವಿಯ ಕವನಗಳು 'ಯಾತನಾಮಯವಾದ ಆದರೆ ಸ್ಫೂರ್ತಿದಾಯಕವಾದ' ಬದುಕಿನ ಮಜಲುಗಳನ್ನು ಗುರುತಿಸುತ್ತವೆ. ಇವರ 'ಈಸ್ಟರ್ನ್ ಸ್ಲೋಪ್' ಎಂಬ ಕವನ ಸಂಕಲನ ಭಾರತದಲ್ಲಿದ್ದಾಗ ಬರೆದ ಕವಿತೆಗಳನ್ನು ಹೊಂದಿದೆ.

'ವೃಂದಾವನ್', 'ಲೋದಿ ಗಾರ್ಡನ್ಸ್', 'ಹಿಮಾಚಲ ಪ್ರದೇಶ' ಎಂದೆಲ್ಲ ಕವಿತೆಗಳಿವೆ. ಕೆಲವು ಕವಿತೆಗಳಲ್ಲಿ ಕಾಳಿ ಮತ್ತು ಹನುಮಾನರ ಉಲ್ಲೇಖವೂ ಇದೆ. ಇವರು ಭಾರತದಲ್ಲಿದ್ದಾಗಲೇ ಮೇರಿ ಜೋಸ್ ಎಂಬುವಳನ್ನು ಪ್ರೀತಿಸಿ ಮದುವೆಯಾದರು. ಇವರ ಕೆಲವು ಪ್ರಮುಖ ಕವನ ಸಂಕಲನಗಳೆಂದರೆ, 'ಎ ಡ್ರಾಪ್ಟ್ ಆಫ್ ಶಾಡೊಸ್' (1975), ಹಾಗೂ 'ರಿಟರ್ನ್' (1976). ಆರು ವರ್ಷಗಳ ಕಾಲ ದೆಹಲಿಗನಾಗಿ ಭಾರತೀಯ ಸಂಸ್ಕೃತಿಯ ವಿವಿಧ ಮುಖಗಳನ್ನು ಆಳವಾಗಿ ಅಭ್ಯಾಸ ಮಾಡಿದ ಈ ಕವಿ ದೇಶ–ಭಾಷೆಗಳ ಎಲ್ಲೆಮೀರಿದ ಮಾನವ ಜೀವನದ ಸಾರ್ವತ್ರಿಕತೆಯ ಪ್ರತೀಕ.

# ಕಾವ್ಯ ಮತ್ತು ಚರಿತ್ರೆ

ಮೂಲ : ಆಕ್ಟೋವಿಯೊ ಪಾಜ್
ಕನ್ನಡಕ್ಕೆ : ನಾಗಣ್ಣ

ಕಾವ್ಯದ ಲಾಭಕ್ಕಾಗಿ, ಕಾವ್ಯ ಮತ್ತು ಚರಿತ್ರೆ ಸಮನ್ವಯಗೊಳ್ಳುವ ಪ್ರಯತ್ನದಲ್ಲಿ ಕವನ ಹುಟ್ಟುತ್ತದೆ. 'ಯುಗದ ಅಲೆ' ಎಂದು ನಾವು ಕರೆಯುವ ಕಾಲದ ಸೆಳೆತದಲ್ಲಿರುವಾಗಲೂ ಕವಿ ಇತಿಹಾಸದ ಮುಷ್ಟಿಯಿಂದ ಪಾರಾಗಿರುತ್ತಾನೆ. ಈ 'ಯುಗದ ಅಲೆ' ಎನ್ನುವುದು ಆಧುನಿಕ ಜಗತ್ತಿನಲ್ಲಿ ಅಪರೂಪವಾಗುತ್ತಿರುವ ಘಟನೆ. ಮಾಂತ್ರಿಕ ಸೂತ್ರ ಮತ್ತು ಮಹಾಕಾವ್ಯದಿಂದ ಹಿಡಿದು 'ಆಟೋಮ್ಯಾಟಿಕ್ ರೈಟಿಂಗ್'ನವರೆಗೆ ಎಲ್ಲಾ ಅದ್ಭುತ ಕಾವ್ಯಪ್ರಯೋಗಗಳೂ, ಚರಿತ್ರೆ ಮತ್ತು ಕಾವ್ಯ, ನಿಜಸ್ಥಿತಿ ಮತ್ತು ಪುರಾಣ ಇವುಗಳ ಸಂಗಮವಾಗುವುದು ಕವನದಲ್ಲಿ ಎಂದು ಹೇಳುತ್ತವೆ. ಹಾಗೆಯೇ ಪುನರಾವರ್ತನೆಯಾಗದ ಘಳಿಗೆ ಮತ್ತು ಉತ್ಸವ ಕೂಡ ಅಲ್ಲಿಯೇ ಸಂಗಮಿಸುವುದು. ನಿಗೂಢ ಚೇತನದಿಂದ ಕೂಡಿದ ಈ ಹಬ್ಬದ ಕ್ಷಣವು ಮಾತ್ರ ಹೊಸ ಪರ್ವದ ಉದ್ಘಾಟನೆಗೆ ಮತ್ತೆ ಮತ್ತೆ ಸಂಭವಿಸುತ್ತಿರುತ್ತದೆ. ಕಾವ್ಯದ ಗುಣವನ್ನು ನಾವು ಉತ್ಸವ ಎನ್ನುವುದು ಪಂಚಾಂಗದಲ್ಲಿ ಒಂದು ದಿನವಾಗಿರುವಂತೆಯೇ ಕಾಲದ ಸ್ವೈರುತ್ಯವನ್ನು ಮುರಿದು ನಿನ್ನೆ ನಾಳೆಗಳಿಲ್ಲದಂತೆ ವರ್ತಮಾನವನ್ನು ಸ್ಥಗಿತಗೊಳಿಸುವ ಪರಿಯಂತೆಯೇ ಕಾವ್ಯವೂ ಸಹ ಎನ್ನಬಹುದು. ಪ್ರತಿಯೊಂದು ಕವನವೂ ಹಬ್ಬದ ಹಾಗೆ, ಪರಿಶುದ್ಧ ಕಾಲದ ಕೆನೆಯಾಗಿದೆ.

ಮನುಷ್ಯರು ಮತ್ತು ಚರಿತ್ರೆಯ ಸಂಬಂಧ ಗುಲಾಮಗಿರಿ ಮತ್ತು ಪರಾವಲಂಬನೆಯದು. ಏಕೆಂದರೆ, ಚರಿತ್ರೆಯಲ್ಲಿ ನಾವು ಮುಂದಾಳುಗಳಾಗಿರುವಂತೆಯೇ ಅದಕ್ಕೆ ಕಚ್ಚಾ ಪದಾರ್ಥಗಳು ಮತ್ತು ಬಲಿಪಶುಗಳಾಗಿಯೂ ಇರುತ್ತೇವೆ. ಅದಕ್ಕೆ ಸಂತೃಪ್ತಿಯಾಗುವುದು ನಮ್ಮ ಕ್ಷಯದಿಂದ. ಕಾವ್ಯ ಈ ಮೇಲೆ ಹೇಳಿದ ಸಂಬಂಧವನ್ನು ಮಾರ್ಪಾಟುಗೊಳಿಸುತ್ತದೆ. ಕಾವ್ಯಕ್ಕೆ ತುಷ್ಟಿ ದೊರಕುವುದು ಚರಿತ್ರೆಯ ನಾಶದಿಂದ. ಕಾವ್ಯದ ಉತ್ಪನ್ನಗಳಾದ—ನಾಯಕ, ಕೊಲೆಪಾತಕಿ, ಪ್ರೇಮಿ, ರೂಪಕ ಕಥೆ, ಅರೆಬರೆ ಶಾಸನ, ಪಲ್ಲವಿ, ಪ್ರಮಾಣ ; ಆಟವಾಡುವ ಮಗು ತನಗರಿವಿಲ್ಲದಂತೆಯೇ

ಎಚ್ಚರಿಗೊಳ್ಳುವುದು, ಶಿಕ್ಷೆಗೊಳಗಾದ ಅಪರಾಧಿ, ಪ್ರಥಮ ಬಾರಿಗೆ ಸಂಭೋಗ ಸುಖ ಅನುಭವಿಸುವ ಬಾಲೆ ; ಗಾಳಿಯಲ್ಲಿ ತೇಲುವ ಪದಗುಚ್ಛ, ಕೂಗಿನ ಒಂದು ತುಣುಕು– ಇವುಗಳಿಗೆ ಮಾತ್ರ ಸಾವೆಂಬುದು ಇಲ್ಲ ; ಇವುಗಳನ್ನು ಯಾರೂ ಧ್ವಂಸ ಮಾಡಲಾರರು. ಕಡೆಯವರೆಗೂ ಬದುಕಲು ಅವು ಸಮರ್ಥವಾದವು. ಕಾರ್ಯಕಾರಣಗಳ ಹಿಡಿತದಿಂದ ತಮ್ಮ ತಾವು ಬಿಡುಗಡೆ ಮಾಡಿಕೊಳ್ಳುವಂಥವು. ಅವು ತಮ್ಮನ್ನು ಸೃಷ್ಟಿಸಿ ತಮಗೊಂದು ರೂಪ ಕೊಡಬಲ್ಲಂಥ ಕವನಕ್ಕಾಗಿ ಕಾಯುತ್ತಿರುತ್ತವೆ. ಚರಿತ್ರೆಯು ಹೊರತಾಗಿ ಕಾವ್ಯವಿಲ್ಲವಾದರೂ, ಚರಿತ್ರೆಯನ್ನು ರೂಪಾಂತರಗೊಳಿಸುವುದೇ ಕಾವ್ಯದ ಮೂಲ ಗುಣ ಎನ್ನಬಹುದು. ಅಂದ ಮೇಲೆ, ಪ್ರಳಯಕಾವ್ಯ ಬರೆಯುವವನೇ ನಿಜವಾದ ಕವಿ.

ಇತಿಹಾಸ ಮತ್ತು ಸಮಾಜದ ಮೂಲ ಚೇತನವಾದ ಭಾಷೆಯಿಂದಲೇ ಕಾವ್ಯ ನಿರ್ಮಾಣವಾಗುವುದು. ಆದರೆ ಅದು ಸಂಭಾಷಣೆ ಮತ್ತು ತಾರ್ಕಿಕ ಉಪನ್ಯಾಸದ ಹಿಡಿತಕ್ಕೆ ಸಿಕ್ಕದ ಬೇರೊಂದು ಮಾರ್ಗಾನುಸಾರಿಯಾಗಿ ಭಾಷೆಯನ್ನು ಪುನರ್ನಿರ್ಮಿಸಲು ಪ್ರಯತ್ನಿಸುತ್ತಿರುತ್ತದೆ. ಭಾಷೆಯ ಅತ್ಯಂತ ನಿಗೂಢವಾದ ಮೂಲೆಗಳಲ್ಲಿ ಈ ಕಾವ್ಯಾತ್ಮಕ ರೂಪಾಂತರ ನಡೆಯುತ್ತಿರುತ್ತದೆ. ಭಾಷೆಯ ಅತ್ಯಂತ ಸರಳವಾದ ಮೂಲವಸ್ತುವೆಂದರೆ ಪದಗುಚ್ಛವೇ ಹೊರತು ಬಿಡಿಪದವಲ್ಲ ; ಅದೇ ಅದರ ಜೀವ ಕೋಶ. ಒಂದು ಪದ ಇನ್ನೊಂದು ಪದವಿಲ್ಲದೆ ಬದುಕಲಾರದು, ಹಾಗೆಯೇ ಒಂದು ಪದಗುಚ್ಛ ಇನ್ನೊಂದು ಪದಗುಚ್ಛವನ್ನು ಬಿಟ್ಟಿರಲಾರದು.

ಅಂದಮೇಲೆ, ಪ್ರತಿಯೊಂದು ವಾಕ್ಯವೂ ಇನ್ನೊಂದು ವಾಕ್ಯವನ್ನು ನಿರೀಕ್ಷಿಸುತ್ತಿರುತ್ತದೆ ; ನಂತರ ಮತ್ತೊಂದು ವಾಕ್ಯದಿಂದ ವ್ಯಾಖ್ಯಾನ ಪಡೆಯಲು ಪಕ್ಕಾಗುತ್ತದೆ. ಪ್ರತಿಯೊಂದು ಪದಗುಚ್ಛವೂ ಏನೋ ಒಂದು ವಿಚಾರವನ್ನು 'ಹೇಳುವ ತವಕ'ದಿಂದ ಇರುತ್ತದೆ ; ಹಾಗೆ ಮಾಡುವಾಗ ಭಾಷೆಯಿಂದ ಹೊರಗಿರುವ ಯಾವುದೋ ಒಂದು ಅಂಶಕ್ಕೆ ಲಕ್ಷ್ಯಕೊಟ್ಟಿರುತ್ತದೆ. ಭಾಷೆ ಪರಸ್ಪರ ಬದಲಾಗಬಹುದಾದ, ಗತಿಶೀಲವಾದ ಸಂಕೇತಗಳ ಸಂಗಮವಾಗಿದೆ. ಭಾಷೆ ಯಾವ 'ದಿಕ್ಕಿನಲ್ಲಿ' ನಡೆಯುತ್ತಿದೆ ಎನ್ನುವುದನ್ನು ಇವು ಒಂದೊಂದೂ ಸೂಚಿಸುತ್ತವೆ. ಈ ಪ್ರಕಾರವಾಗಿ ಅರ್ಥ ಮತ್ತು ಸಂವಹನ ಎರಡೂ ಪದಗಳ 'ಅಭೀಪ್ಸತೆ'ಯ ಆಧಾರದ ಮೇಲೆ ನಿಂತಿವೆ. ಆದರೆ ಅವಕ್ಕೆ ಕಾವ್ಯದ ಸ್ಪರ್ಶವಾದ ಕೂಡಲೇ ಲಯದ ಗಣಗಳು ಮತ್ತು ಪ್ರತಿಮೆಗಳಾಗಿ ಅವು ಮಾರ್ಪಾಟಾಗುತ್ತವೆ ; ತಮ್ಮಷ್ಟಕ್ಕೆ ತಾವೇ ನಿಲ್ಲಬಲ್ಲ ಸ್ವಯಂಪೂರ್ಣ ಘಟಕಗಳಾಗುತ್ತವೆ. ಪದಗಳು ಏಕಾಏಕಿ ತಮ್ಮ ಚಲನೆಯನ್ನು ಕಳೆದುಕೊಂಡು ಬಿಡುತ್ತವೆ; ಗದ್ಯದಲ್ಲಿಯಾದರೆ ಒಂದು ವಿಷಯವನ್ನು ಅನೇಕ ವಿಧಗಳಲ್ಲಿ ಹೇಳಬಹುದಾಗಿದೆ ; ಕಾವ್ಯದಲ್ಲಿ ಇರುವುದು ಮಾತ್ರ ಒಂದೇ ಬಗೆ. ಕಾವ್ಯಪದಕ್ಕೆ ಪರ್ಯಾಯಪದ ಇಲ್ಲವೇ ಇಲ್ಲ. ಕಾವ್ಯ ಏನೋ ಒಂದನ್ನು ಹೇಳುವ 'ಅನಿಸಿಕೆ' ಅಲ್ಲ, ಆದರೆ ಅದು ಮತ್ತೆ ಮರಳಿ ಪಡೆಯಲಾಗದ 'ಅಂದು ಬಿಟ್ಟ' ವಾಕ್ಯ. ಇನ್ನೊಂದು ಬಗೆಯಲ್ಲಿ ಹೇಳುವು

ದಾದರೆ, ಕಾವ್ಯ ಎನ್ನುವುದು ಯಾವುದೋ ಒಂದು 'ಕಡೆಗೆ' ಹೋಗುವಂಥದಲ್ಲ, ಯಾವುದರ ಬಗ್ಗೆಯಾದರೂ ಹೇಳುವಂಥದಲ್ಲ. ಮರಳಿ ಪಡೆಯಲಾಗದ, ಬದಲಾಯಿಸಲಾಗದ ಕಾವ್ಯದ ಪದಗಳು ಅವು ಬಯಸುವ ರೀತಿಯಲ್ಲಲ್ಲದೆ ಅನ್ಯ ರೀತಿಯಲ್ಲಿ ತಮ್ಮನ್ನು ವ್ಯಾಖ್ಯಾನಿಸಲು ಬಿಡುವುದಿಲ್ಲ. ಅವುಗಳ ಅರ್ಥ ಹೊರಗೆಲ್ಲೋ ಇರದೆ ಅವುಗಳ ಒಳಗೇ ಇದೆ; ಪ್ರತಿಮೆ ಕೂಡ ಅರ್ಥದ 'ಒಳಗೆ' ಇರುವಂಥದು.

ಪರಸ್ಪರ ವಿರೋಧವಾಗಿ ಸಂಕ್ಷೇಪಗೊಳಿಸಲು ಆಗದಂತೆ ತೋರುವ ಅಂಶಗಳನ್ನು ಏಕತ್ರ ಮಾಡುವುದೇ ಕಾವ್ಯ ಪ್ರತಿಮೆಯ ಮೂಲ ಉದ್ದೇಶವಾಗಿದೆ. ಆದಾಗ್ಯೂ, ತಾನು ಪುನಃ ಸೃಷ್ಟಿ ಮಾಡುವ ಘಟಕಗಳ ನಡುವಿನ ವಿರೋಧ ಮತ್ತು ಸಂಘರ್ಷವನ್ನು ತ್ಯಾಗ ಮಾಡದ ರೀತಿಯಲ್ಲಿ ಈ ಪ್ರಕ್ರಿಯೆ ನಡೆಯುತ್ತಿರುತ್ತದೆ. ಆದಕಾರಣ, ವಾಸ್ತವವಾಗಿ ಕಾವ್ಯಪ್ರತಿಮೆ ಎಂಬುದನ್ನು ವ್ಯಾಖ್ಯಾನಿಸಲಾಗುವುದಿಲ್ಲ. ವಾಸ್ತವ ನಮಗೆ ಗೋಚರಿಸುವ ದ್ವಂದ್ವದ ಕ್ರಮದಲ್ಲೇ ಕಾವ್ಯದ ಭಾಷೆ ಕೂಡ ಕ್ರಿಯಾಶೀಲವಾಗಿರುತ್ತದೆ. ಭಾಷೆಯನ್ನು ರೂಪಾಂತರಗೊಳಿಸುವ ಪ್ರಕ್ರಿಯೆಯಲ್ಲಿ ಪ್ರತಿಮೆ ವಾಸ್ತವದ ದರ್ಶನಕ್ಕೆ ದ್ವಾರವನ್ನು ತೆರೆಯುವುದರ ಜೊತೆಗೆ ವಾಸ್ತವದ ಭಿನ್ನತೆಯಲ್ಲಿ ಅಂತರ್ಗತವಾದ ಅಂತಿಮ ಐಕ್ಯವನ್ನೂ ನಮ್ಮ ಮುಂದೆ ಅನಾವರಣ ಮಾಡುತ್ತದೆ. ಪದಗುಚ್ಛ ಪ್ರತಿಮೆಯಾಗುತ್ತದೆ. ಕವನವೆಂದರೆ ಅದು ಒಂದು ಪ್ರತಿಮೆ, ಅಥವಾ ಅನೇಕ ಪ್ರತಿಮೆಗಳ ಕೂಡಿಕೆ. ನಾವು ವಾಸ್ತವವೆಂದು ಕರೆಯಬಹುದಾದದ್ದು ಅಂತರ್ಧಾನವಾದಾಗ ಉಳಿಯುವ ಶೂನ್ಯವನ್ನು ಪರಸ್ಪರ ವಿರೋಧವಾದ ಕಲ್ಪನೆಗಳು ಆಕ್ರಮಿಸಿಕೊಂಡು ಉಲ್ಲೇಖಗಳ ಸಂಗಮವಾಗುವುದರ ಮೂಲಕ ವೈರುಧ್ಯವನ್ನು ಸರಿಪಡಿಸಿಕೊಳ್ಳುವ ಹವಣಿಕೆಯಲ್ಲಿರುತ್ತವೆ—ಈ ಪ್ರತಿಕ್ರಿಯೆಯ ಕನಸೇ ಕವನ. ಅಪಾರ ದರ್ಶಕವಾದ, ಜಡ್ಡುಗಟ್ಟಿದ ಪದಸಮುಚ್ಚಯದ ಈ ಕವನ ತನ್ನನ್ನು ಸ್ಪರ್ಶಿಸುವ ತುಟಿಗಳು ಮುಂದೆ ಬಂದಾಗಲೆಲ್ಲ ಹೊತ್ತಿ ಉರಿಯುವ ಒಂದು ವಿಶ್ವವಾಗುತ್ತದೆ. ಕೆಲವೊಂದು ಸನ್ನಿವೇಶಗಳಲ್ಲಿ, ಕೆಲವರ ಬಾಯಲ್ಲಿ, ಈ ಶಬ್ದಯಂತ್ರ ಸ್ಪಷ್ಟ ಸತ್ಯಗಳ ಉಗಮ ಸ್ಥಾನವಾಗಿ ಪರಿಣಮಿಸಿ ಬಾಹ್ಯ ಪ್ರದರ್ಶನವನ್ನು ಅನಾವಶ್ಯಕಗೊಳಿಸುತ್ತವೆ, ನಾವು ಕಾಲದ ಪರಿಪೂರ್ಣತೆಗೆ ಪ್ರವೇಶಿಸುವುದು ಆವಾಗಲೇ. ಭಾಷೆಯನ್ನು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳುವುದರ ಮೂಲಕ ಕವಿ ಅದನ್ನೇ ಮೀರುತ್ತಾನೆ. ಇತಿಹಾಸಕ್ಕೆ ಒತ್ತು ಕೊಡುತ್ತಲೇ ಅದರ ಅಂತರಂಗವನ್ನು ಅವನು ಬಿಡಿ ಬಿಡಿಯಾಗಿ ಕಣ್ಮುಂದೆ ತೆರೆದು ತೋರುವಾಗ ಗೋಚರವಾಗುವುದು ಕಾಲ.

ಇತಿಹಾಸವೆಂದರೆ ಅರ್ಥವಿಲ್ಲದ, ಗುರಿಯಿಲ್ಲದ ಒಂದು ಪ್ರೇತದ ಮೆರವಣಿಗೆ ಎನ್ನುವ ಗುಮಾನಿ ನಮಗೆ ಬರುವ ಹಾಗಾದರೆ ಭಾಷೆಯ ದ್ವಂದ್ವ ಇನ್ನಷ್ಟು ಸ್ಪಷ್ಟವಾಗಿ ಗೋಚರಿಸಿ ನೈಜವಾದ ತರ್ಕಕ್ಕೆ ಅಡ್ಡಿಯುಂಟುಮಾಡುತ್ತದೆ. ಪದಗಳು ತಮ್ಮ ಅರ್ಥವನ್ನು ಕಳೆದುಕೊಳ್ಳುತ್ತವೆ, ಹಾಗೆಯೇ ತಮ್ಮ ಸಂವಹನ ಶಕ್ತಿಯನ್ನೂ ಕೂಡ. ಚರಿತ್ರೆ ಕೇವಲ ಬಿಡಿ ಬಿಡಿ ಘಟನೆಗಳ ಸರಪಳಿ ಎಂದು ವ್ಯವಕಲನಗೊಳ್ಳುವುದಾದರೆ

ಭಾಷೆಯೂ ಸಹ ನಿರ್ಜೀವ ಸಂಕೇತಗಳ ಶೇಖರಣೆಯಾಗಿ ಕಂಡುಬಿಡುತ್ತದೆ. ಪದಗಳು ಎಲ್ಲರಿಂದ ಬಳಸಲ್ಪಡುತ್ತವೆಯಾದರೂ ಒಬ್ಬರ ಮಾತು ಇನ್ನೊಬ್ಬರಿಗೆ ಅರ್ಥವಾಗಲೊಲ್ಲದು. ಹಾಗೆಯೇ ಪದಗಳ ಅರ್ಥಗಳ ಬಗ್ಗೆ 'ಒಂದು ಒಪ್ಪಂದಕ್ಕೆ ಬರುವ' ಪ್ರಯತ್ನ ಕೂಡ ನಿಷ್ಪ್ರಯೋಜಕವಾದದ್ದು. ಭಾಷೆ ಕೇವಲ ಒಂದು ಸಂಪ್ರದಾಯವಲ್ಲ, ಅದು ಮನುಷ್ಯನನ್ನು ಬೇರ್ಪಡಿಸಲಾಗದ ಆಯಾಮ. ಪ್ರತಿಯೊಂದು ಶಬ್ದ ಸಾಹಸವೂ ಸಂಪೂರ್ಣವಾದದ್ದು ; ಒಂದೇ ಒಂದು ಪದಕ್ಕಾಗಿ ವ್ಯಕ್ತಿ ತನ್ನ ಇಡೀ ಬದುಕನ್ನು ಪಣವಾಗಿ ಒಡ್ಡಿರುತ್ತಾನೆ. ತನ್ನ ಇಡೀ ಚೇತನವನ್ನೇ ಪದದೊಂದಿಗೆ ಅಭಿನ್ನವಾಗಿ ಜೋಡಿಸಿಕೊಳ್ಳುವ ವ್ಯಕ್ತಿಯೇ ಕವಿ. ಆದ್ದರಿಂದ ಹೊಸ ಸಂಭಾಷಣೆಯನ್ನು ಸಾಧ್ಯ ಮಾಡುವವನೂ ಸಹ ಕವಿಯೇ.

ಸಾಮಾನ್ಯ ಭಾಷೆಯಲ್ಲಿ ಬೇರುಬಿಟ್ಟ ಪದಗಳು ಕವನದಲ್ಲಿ ಮರುಹುಟ್ಟು ಪಡೆಯುತ್ತವೆ ಎಂಬುದನ್ನು ಇದರಿಂದ ನಾವು ತೀರ್ಮಾನಿಸಬಹುದು. ಆಧುನಿಕ ಕಾವ್ಯದ ರಸತಂತ್ರವು ಈ ವಿಧಾನದಿಂದ ಅಸ್ತಿತ್ವಕ್ಕೆ ಬರುತ್ತದೆ. ಆದರೆ ಪದಗಳನ್ನು ಮಾತ್ರ ಮನುಷ್ಯರಿಂದ ಪ್ರತ್ಯೇಕಗೊಳಿಸಲಾಗುವುದಿಲ್ಲ. ಅಂದಮೇಲೆ, ಕಾವ್ಯ ಚಟುವಟಿಕೆ ಕವಿಯಿಂದ ಹೊರಗೆ—ಕವನ ಪ್ರತಿನಿಧಿಸುವ ಮಾಂತ್ರಿಕ ವಸ್ತುವಿನಲ್ಲಿ—ನಡೆಯುಲಾಗದು ; ಅದಕ್ಕೆ ಬದಲಾಗಿ ವ್ಯಕ್ತಿಯನ್ನೇ ಅದು ತನ್ನ ಅನುಭವದ ಕೇಂದ್ರವನ್ನಾಗಿ ತೆಗೆದುಕೊಳ್ಳುತ್ತದೆ. ಕೇವಲ ಕವನದಲ್ಲಲ್ಲದೆ ವ್ಯಕ್ತಿಯಲ್ಲೇ ವಿರೋಧಗಳು ವಿಲೀನವಾಗುವುವು. ಕವಿ ಮತ್ತು ಕವನ ಅಭಿನ್ನವಾದವರು. ರಿಂಬಾಡ್‌ನ ಕಾವ್ಯದಲ್ಲಿ ಕಾಣುವಂತೆಯೇ ನಮ್ಮ ನಾಗರಿಕತೆಯ ಕಳೆದ ಒಂದು ಶತಮಾನದ ಶ್ರೇಷ್ಠ ಕವಿಗಳ ಧ್ಯೇಯ ಕೂಡ ಈ ತತ್ತ್ವದ ಸಾಕಾರವೇ ಆಗಿದೆ. ಈ ಶತಮಾನದ ಕಡೆಯ ದೊಡ್ಡ ಚಳವಳಿಯಾದ ಅತಿವಾಸ್ತವವಾದವೂ ಇದಕ್ಕಿಂತ ಭಿನ್ನವಾಗಿಲ್ಲ. ಮಹಾಕವಿ ಎನ್ನಿಸಿಕೊಳ್ಳುವ ಯಾವ ಕವಿಯೇ ಆಗಲಿ ಈ ಚಳವಳಿಯಿಂದ ಹೊರಗಿರಲಾರ. ನಮ್ಮನ್ನು ಕಿತ್ತು ಬೇರ್ಪಡಿಸುವ ದ್ವಂದ್ವವನ್ನು ಬೇಸರದಿಂದಲಾದರೂ ಧ್ವಂಸ ಮಾಡುವ ಕ್ರಮದಲ್ಲಿ ಈ ಪ್ರಯತ್ನದ ಅದ್ಭುತ ಸೌಂದರ್ಯ ಎದ್ದು ಕಾಣುವುದು. ಅನೂಹ್ಯದ ಕಡೆಗೆ ಕಾವ್ಯ ಜಿಗಿಯದಿದ್ದರೆ ಅದು ಕಾವ್ಯವೇ ಅಲ್ಲ.

ಕಾವ್ಯದ ಅತಿಶಕ್ತಿಯ ಬಗ್ಗೆ ವಕಾಲತ್ತು ವಹಿಸುವುದು ಈ ಕಾಲದಲ್ಲಿ ಹಾಸ್ಯಾಸ್ಪದವಾಗಿ ಕಾಣಬಹುದು. ಇತಿಹಾಸದ ಯಜಮಾನ್ಯ ಈ ಕಾಲದಲ್ಲಿ ಕಂಡಷ್ಟು ಢಾಳಾಗಿ ಬೇರೆ ಕಾಲದಲ್ಲಿ ನಮಗೆ ಕಾಣಿಸುವುದಿಲ್ಲ. 'ಮುಂದೇನು ಮಾಡುವುದು ?' ಎಂಬ ಚಿಂತೆ ನಮ್ಮನ್ನು ಹೆಚ್ಚು ಹೆಚ್ಚು ಅಸಹಿಷ್ಣುತೆಯ ಕಡೆಗೆ ನೂಕುತ್ತಿರುವ ಪ್ರಸ್ತುತದಲ್ಲಿ—ಯಾವ ಕ್ರಿಯೆಗೂ ನಮ್ಮ ಒಪ್ಪಿಗೆಯನ್ನು ಯಾರೂ ಪಡೆದವರಲ್ಲ ಮತ್ತು ಮನುಷ್ಯನ ವಿನಾಶದ ಕಡೆಗೇ ಎಲ್ಲ ಪ್ರಯತ್ನಗಳೂ ಸಾಗಿರುವಾಗ—ಕಾವ್ಯ ಕರ್ಮವೂ ಕೂಡ ಹೆಚ್ಚು ಹೆಚ್ಚು ರಹಸ್ಯವಾಗಿ, ಎಲ್ಲರಿಂದ ದೂರವಾಗಿ ಅಪರೂಪವಾಗುತ್ತಿದೆ. ಸಾಮಾಜಿಕ ಸ್ಥಿತಿಯನ್ನು ಒಪ್ಪಿಕೊಂಡು ಅದರ ದ್ವಂದ್ವ ನೀತಿಯನ್ನು

ಬಯಲಿಗೆಳೆಯುವಾಗ ನಿನ್ನೆ ಮೊನ್ನೆಯವರೆಗೂ ಕವನ ಬರೆಯುವುದು ಮತ್ತು ಪ್ರೇಮಿಸುವುದು ಬುಡಮೇಲು ಕೃತ್ಯಗಳಾಗಿ ಗೋಚರಿಸುತ್ತಿದ್ದವು. ಆದರೆ ಈವೊತ್ತು ಸಾಮಾಜಿಕ ಸ್ಥಿತಿಯ ಕಲ್ಪನೆಯೇ ಬದಲಾಗಿ ಅದರ ಜಾಗವನ್ನು ವಿವಿಧ ಬಲಗಳ, ಗುಂಪಿನ ಮತ್ತು ನಿರೋಧಗಳ ಕೂಟ ಆಕ್ರಮಿಸಿವೆ. ವಾಸ್ತವತೆ ತನ್ನ ಮಾರುವೇಷವನ್ನು ತೆಗೆದುಹಾಕಿ ಸಮಕಾಲೀನ ಸಮಾಜವು ತನ್ನ ನಿಜ ರೂಪಿನಲ್ಲಿ ಪ್ರತ್ಯಕ್ಷವಾಗುತ್ತಿದೆ. ಪ್ರಚಾರ ಅಥವಾ ಚಾಟಿಯ ಬಲದಿಂದ 'ವಿಲೀನ'ಗೊಂಡಿರುವ ಕಲಬೆರಕೆಯ ಕೂಟಗಳು ನರಾಧಮರಿಂದ ನಿರ್ದೇಶಿಸಲ್ಪಡುತ್ತಿವೆ. ಅವರ ರಾಕ್ಷಸತನದಲ್ಲಿ ಕೇವಲ ಪ್ರಮಾಣದಲ್ಲಿ ಮಾತ್ರ ವ್ಯತ್ಯಾಸವಿರಬಹುದು ಅಷ್ಟೆ. ಇಂಥ ಸಂದರ್ಭಗಳಲ್ಲಿ ಕಾವ್ಯ ಸೃಷ್ಟಿ ಕಣ್ಮರೆಯಾಗಿಬಿಡುತ್ತದೆ. ಕವನ ಒಂದು ಉತ್ಸವ ಎಂತಾದರೆ, ಋತುಮಾನದ ಹೊರಗೆ, ನಿರ್ಜನವಾದ ವಲಯದಲ್ಲಿ—ಭೂಗತ ಸಡಗರವಾಗಿ ಅದು ಗೋಚರವಾಗಬಹುದು. ಸಾಮುದಾಯಿಕ ಸಂವಹನದ ಉಸಿರಾಗಿ ನಿನ್ನೆ ಕಾರ್ಯ ಮಾಡಿದ ಕಾವ್ಯ, ದಬ್ಬಾಳಿಕೆ ಮತ್ತು ಸಂಖ್ಯಾಬಲದ ಆಕ್ರಮಣದಿಂದ ಇಂದಿಗೂ ಕೂಡ ನಮ್ಮನ್ನು ರಕ್ಷಿಸುತ್ತಿದೆ. ನಮ್ಮನ್ನು ಸರ್ವನಾಶಗೊಳಿಸುವುದರಿಂದ ತೃಪ್ತರಾಗದೆ ನಮ್ಮ ಅಂತಸ್ಸಾಕ್ಷಿಯನ್ನೂ ಆಳಲು ಮುಂದಾಗುವ ಎಲ್ಲ ಶಕ್ತಿಗಳ ಮುನ್ನಡೆಯನ್ನು ತಡೆದು 'ಇಲ್ಲ' ಎನ್ನುವ ಸೊಲ್ಲು ಕಾವ್ಯ ; ಆಧುನಿಕ ಮಾನವನಿಗೆ ದಕ್ಕಿರುವ ಮಾರ್ಗೋಪಾಯಗಳಲ್ಲಿ ಒಂದು. ಈ 'ಇಲ್ಲ' ಎನ್ನುವ ನಿರಾಕರಣೆಯ ಅಂತರಂಗದಲ್ಲೇ 'ಹೌದು' ಎನ್ನುವ ಸಕಾರಾತ್ಮಕ ಶಕ್ತಿ ಮನೆಮಾಡಿಕೊಂಡಿರುವುದು ಒಂದು ವಿಶೇಷ.

## ಜನವರಿ ಒಂದು

ಮೂಲ : ಆಕ್ಟೋವಿಯೊ ಪಾಜ್
ಅನುವಾದ : ರಾಮಚಂದ್ರ ಶರ್ಮ

ಭಾಷೆಯು ಹಾಗೆ
ಅವ್ಯಕ್ತಕ್ಕೆ ಹೊಸ ವರ್ಷ ಬಾಗಿಲ ತೆರೆಯುತ್ತಿದೆ.
ನೆನ್ನೆ ಮಲಗುವ ಮೊದಲು ನೀ ಹೇಳಿದೆ :

'ನಾಳೆ,
ನಾವು ಹೊಸ ಹೊಸ ಸಂಕೇತಗಳ ಕಟ್ಟಿ,
ಭೂ ದೃಶ್ಯಗಳ ಚಿತ್ರಗಳ ಬಿಡಿಸಿ,
ಒಂದು ಕಡೆ ಕಾಲ ಇನ್ನೊಂದು ಕಡೆ ಖಾಲಿ
ಇರುವಂಥ ದ್ವಿದಳ ಹಾಳೆಯ ಮೇಲೆ
ನಕಾಸೆ ಹಾಕಬೇಕಾಗಿದೆ.
ಇನ್ನೊಮ್ಮೆ, ನಾಳೆ,
ಈ ಜಗತ್ತಿನಸ್ತಿತ್ವವನ್ನು ಸೃಷ್ಟಿ ಮಾಡಬೇಕಾಗಿದೆ.'

ಕಣ್ಣು ಬಿಟ್ಟಾಗ
ಆಗಲೇ ಹೊತ್ತೇರಿತ್ತು.
ಬಾನಂಚಲ್ಲಿ ಕಂಡ ಬಿರುಕಿನೊಳಗಿಂದ
ಕಾಲ ಮರಳಿ ಬಂದರೂ ಬರಬಹುದೆಂದು
ತುದಿಬಿಟ್ಟದಲ್ಲಿ ಕಾದು ನಿಂತೊಬ್ಬ
ಅಜ್ಜೈಕ್ಯನನುಭವ ನನ್ನದಾಗಿತ್ತು
ಗಳಿಗೆವರೆಗೆ

ಹಾಗಾಗದೇ,
ಹೋದ ವರ್ಷವೇ ಹಿಂದಿರುಗಿ ಬಂದಂತಿದೆ.
ಕೋಣೆಯಪ್ಪನನ್ನು
ಆವರಿಸಿ ನಿಂತಿದ್ದವನ್ನು ಕಣ್ಣು
ತಡವಿದ ಹಾಗೆ. ನಮ್ಮ ನೆರವಿಲ್ಲದೇ
ಕಾಲ ನೆನ್ನೆ ಇಟ್ಟಿದ್ದ ಹಾಗೇ
ಜನವಿರದ ಬೀದಿಯಲ್ಲಿ ಮನೆಯನ್ನು
ಮನೆಯ ತಲೆಗೆ ಹಳೇಕು ಮಂಜನ್ನು,
ಮಂಜಿನ ತಲೆಗೆ ಮೌನವನ್ನಿಟ್ಟ ಹಾಗೆ.

ಪಕ್ಕಕ್ಕೆ ನೀನು,
ನಿನ್ನ ಹರಿಯಂದ ನಿದ್ದೆ.
ಹಗಲಾಗಲೇ ನಿನ್ನ ಸೃಷ್ಟಿಸಿದ್ದರೂ ನೀನು
ಆ ಸೃಷ್ಟಿಯನ್ನೊಲ್ಲದಂತೆ.
ನನ್ನ ಸೃಷ್ಟಿಯೂ ನಿನಗೆ ಸಲ್ಲದಂತೆ.
ಬಹುಶಃ ನೀನಿನ್ನೂ ಇನ್ನೊಂದು ಹಗಲಲ್ಲಿ ಇದ್ದೆ.

ಪಕ್ಕಕ್ಕೆ ನೀನಿದ್ದೆ,
ನಿಜ. ಆದರೂ ತೋಳ್ಗಳ ನಡುವೆ ನಿದ್ದೆ
ಹೋದೊಂದು ಮಂಜ ಹಳುಕಿನ ಹಾಗೆ ಕಂಡೆ.
ನಮ್ಮ ನೆರವಿಲ್ಲದೇ
ಕಾಲ ಮನೆ ಬೀದಿ ಗಿಡವನ್ನು
ಮಲಗಿರುವ ಹೆಣ್ಣನ್ನು ಸೃಷ್ಟಿಸುವುದೆ ಹೀಗೆ.

ನಿದ್ದೆ ಕಳೆದು
ನಿನ್ನ ಕಣ್ಣು ತೆರೆದಾಗ
ನಾವು ಇನ್ನೊಮ್ಮೆ ಗಂಟೆಗಳ ಮಧ್ಯೆ
ಗಂಟೆಗಳು ಸೃಷ್ಟಿಸುವ ಎಲ್ಲದರ ಮಧ್ಯೆ
ನಡೆಯುತ್ತೇವೆ.
ತೋಳ್ಗಳ ನಡುವೆ ನಡೆದಾಡಿ
ಕಾಲಕ್ಕೆ, ಕಾಲದೆಲ್ಲ ನಿಯೋಜನೆಗೆ

ಸಾಕ್ಷಿ ನುಡಿಯುತ್ತೇವೆ.
ಹಗಲ ಬಾಗಿಲು ತೆಗೆದು
ನಮಗಾಗ ಅವ್ಯಕ್ತಕ್ಕೆ ಪ್ರವೇಶ ಸಿಕ್ಕಬಹುದು.

## ಅನ್ಯ

ಸ್ವಂತಕ್ಕೆಂದು ಕಲ್ಪಿಸಿಕೊಂಡ
ಮುಖದ ಹಿಂದವನ
ಹತ್ತಾರು ಹುಟ್ಟು, ಸಾವು. ಹತ್ತಾರು ಸಲ
ಪುನರುತ್ಥಾನ
ಪಡೆದು ಬಂದ.

ಇವೊತ್ತಿನವನ ಮುಖದಲ್ಲೆಲ್ಲ
ಆ ಮುಖದ ಸುಕ್ಕುಗಳು. ಸ್ವಂತ
ಸುಕ್ಕಿಗೆ, ಪಾಪ, ಮುಖವೆ ಇಲ್ಲ.

## ಒಂದು ಹಳ್ಳಿ

ಕಲ್ಲಲ್ಲ ಇವು, ಕಾಲ.
ಗಾಳಿ, ಶತಶತಮಾನಗಳ ಉದ್ದ
ಬೀಸುವ ಗಾಳಿ,
ಗಿಡವೂ ಅಷ್ಟೆ,
ಕಾಲ.
ಇಲ್ಲಿ ಜನವೇ ಕಲ್ಲು.
ಇಲ್ಲಿಯ ಗಾಳಿ ತನ್ನೊಳಗಿನೊಳಕ್ಕೆ
ಬೀಸಿದಂತೆ.
ಮುಳುಗಿ ತಳಕ್ಕೆ
ಕಲ್ಲು ಹಗಲಾದಂತೆ.
ಕಣ್ಣಲ್ಲಿ ಥಳಥಳ ಹೊಳೆದರೂ ನೀರಿಲ್ಲ, ಇಲ್ಲ.

# ಜಾರ್ಜ್ ಶಾಂತಾಯನ

---

ಮೂಲ : ಡಾ. ಸಂಜೀವದೇವ್
ಅನು : ಡಾ. ಎ. ಎಂ. ದೇವಿ

ನಾನು ಭೇಟಿಯಾಗಬೇಕೆಂದುಕೊಂಡಿದ್ದ ಮಹಾಮಾನವರ ಪೈಕಿ ತಾತ್ತ್ವಿಕ ಶಿರೋಮಣಿ ಜಾರ್ಜ್ ಶಾಂತಾಯನ ಒಬ್ಬರು. ಆದರೆ ಅವರನ್ನು ಭೇಟಿಯಾಗಲು ಸಾಧ್ಯವೇ ಆಗಲಿಲ್ಲ: ಮುಂದೆಯೂ ಸಾಧ್ಯವಿಲ್ಲ. ಏಕೆಂದರೆ ಅವರು ರೋಮ್ ನಗರದಲ್ಲಿ ತಮ್ಮ ಭೌತಿಕಕಾಯವನ್ನು ತ್ಯಜಿಸಿದರು.

ಸಾಯುವ ಸ್ವಲ್ಪ ಕಾಲದ ಹಿಂದೆ ತಮ್ಮ ಆತ್ಮಕಥನದ ಕೊನೆಯ ಸಂಪುಟವನ್ನು ಮೊಹರು ಮಾಡಿದ ಲಕೋಟೆಯಲ್ಲಿಟ್ಟು ಅಮೆರಿಕೆಯ ತಮ್ಮ ಪ್ರಕಾಶಕರಿಗೆ ಕಳುಹಿಸಿ, ತಾವು ಅಸುನೀಗುವ ತನಕ ಅದನ್ನು ಬಿಚ್ಚಬಾರದೆಂದು ಸಲಹೆಯಿತ್ತರು. ಅವರು ಸತ್ತ ಬಳಿಕ ಪ್ರಕಾಶಕರು ಆ ಲಕೋಟೆ ತೆರೆದು ಅವರ ಆತ್ಮಕಥನದ ಕೊನೆಯ ಸಂಪುಟವನ್ನು ಈ ವಸಂತದಲ್ಲಿ ಪ್ರಕಟಿಸುತ್ತಿದ್ದಾರೆ (1953). ಅದರ ಹೆಸರು My Host The world. ಅವರು ನಿಧನರಾದಾಗ ಅವರ ವಯಸ್ಸು ಎಂಬತ್ತೆಂಟು ವರ್ಷ.

ಶಾಂತಾಯನರ ಆತ್ಮಕಥನದ ಮೊದಲ ಸಂಪುಟ Persons and Places ಎಂಬುದು 1944ರಲ್ಲಿ ಹೊರಬಂದು: ಪರಿಷ್ಕೃತ ಆವೃತ್ತಿಗಳೂ ಸೇರಿದಂತೆ ನಾಲ್ಕು ಲಕ್ಷ ಪ್ರತಿಗಳು ಮಾರಾಟವಾದುವು! ಅವರ ತಾತ್ತ್ವಿಕ ರಚನೆಗಳು ಸಾಹಿತ್ಯಸೌಂದರ್ಯದಿಂದಲೂ ಸಾಹಿತ್ಯ ರಚನೆಗಳು ತಾತ್ತ್ವಿಕ ಗಾಂಭೀರ್ಯದಿಂದಲೂ ಕೂಡಿರುತ್ತವೆ. ಶಾಂತಾಯನ ಒಣಗಿ ಬರಡಾದ ಕಠೋರ ತಾತ್ತ್ವಿಕನಲ್ಲ. ಅವರ ತತ್ತ್ವವಿದ್ಯೆಯೆಲ್ಲ ರಸಮಯ : ಅವರ ತಾತ್ತ್ವಿಕ ರಚನೆಗಳು ಸೌರಭದಿಂದ ಕೂಡಿದ ಸಾಹಿತ್ಯ ಕುಸುಮಗಳು. ಅವರ ತತ್ತ್ವಶಾಸ್ತ್ರ ಪ್ಲೇಟೊ, ಪ್ಲೋಟಿನಸ್, ಅರಿಸ್ಟಾಟಲ್, ಕ್ಯಾಂಟ್ ಸಿದ್ಧಾಂತಗಳ ಅಧ್ಯಯನ ಮಾತ್ರವಲ್ಲದೆ ಮಾನವ ಜೀವನದ ಮಧುರಸಾಧನೆಯೂ ಆಗಿರುತ್ತದೆ. ಅವರ ತತ್ತ್ವಸಮನ್ವಯದಲ್ಲಿ ಪಾಶ್ಚಾತ್ಯ ಬುದ್ಧಿವಾದ ಮಾತ್ರವಲ್ಲದೆ ಪ್ರಾಚ್ಯಹೃದಯವಾದವೂ ತುಂಬಿದೆ.

ಜಾರ್ಜ್ ಶಾಂತಾಯನ ಸ್ಪೇನಿನ ಮ್ಯಾಡ್ರಿಡ್ ನಗರದಲ್ಲಿ 1863ರಲ್ಲಿ ಜನಿಸಿ

ದರು. ಅವರ ಮಾತೃಭಾಷೆ ಸ್ಪ್ಯಾನಿಷ್ ಆದರೂ ಅನಂತರದ ಜೀವನದಲ್ಲಿ ಇಂಗ್ಲೀಷೇ ಅವರ ಸಾಹಿತ್ಯ ಮಾಧ್ಯಮವಾಯಿತು. ಒಂಬತ್ತನೆಯ ವಯಸ್ಸಿನಲ್ಲೇ ಶಾಂತಾಯನ ಸ್ಪೇನ್ ಬಿಟ್ಟು ಅಮೆರಿಕೆಗೆ ವಲಸೆ ಹೋದರು. ಅಲ್ಲಿಯ ಹಾರ್ವರ್ಡ್ ವಿಶ್ವ ವಿದ್ಯಾಲಯದಲ್ಲಿ ಪದವೀಧರರಾಗಿ (1886), ಅದೇ ವಿಶ್ವವಿದ್ಯಾಲಯದಲ್ಲಿ 1889ರಿಂದ 1912ರ ತನಕ ತತ್ತ್ವಶಾಸ್ತ್ರದ ಪ್ರಾಧ್ಯಾಪಕರಾಗಿದ್ದರು. ಅವರು ಕಡೆಯವರೆಗೂ ಬ್ರಹ್ಮಚಾರಿಯಾಗಿಯೇ ಉಳಿದರು.

1912ರಲ್ಲಿ ಶಾಂತಾಯನ ಅಮೆರಿಕೆ ಬಿಟ್ಟು ಯೂರೋಪಿಗೆ ಹೋದರು. ಯೂರೋಪ್ ಸಂಚಾರದಲ್ಲಿ ಪ್ಯಾರಿಸ್‌ನ ಸಾರ್ಬಾನ್ ವಿಶ್ವವಿದ್ಯಾಲಯದಲ್ಲಿ ಒಂದು ವರ್ಷ ಪ್ರಾಧ್ಯಾಪಕರಾಗಿದ್ದರು. 1923ರಲ್ಲಿ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಸ್ಪೆನ್ಸರ್ ಉಪನ್ಯಾಸಕರಾಗಿದ್ದರು. ಅವರ ಅನಂತರದ ಜೀವನದ ಬಗೆಗೆ ಹೆಚ್ಚಿನ ವಿವರಗಳು ತಿಳಿದುಬರುತ್ತಿಲ್ಲ. ಇಟಲಿಯಲ್ಲಿ ತಮ್ಮ ಕೊನೆಯ ದಿನಗಳನ್ನು ಕಳೆದರು.

ಕೆಲವರಲ್ಲಿ ಅಧ್ಯಯನ ಬೇರೆ, ಆಲೋಚನೆ ಬೇರೆ, ಅನುಭೂತಿ ಬೇರೆ, ಆಚರಣೆ ಬೇರೆ; ವಿದ್ಯಾಭ್ಯಾಸಕ್ಕೂ ವೃತ್ತಿಗೂ ಜೀವನಕ್ಕೂ ಸಾಮರಸ್ಯವೇ ಇರುವುದಿಲ್ಲ. ಜಾರ್ಜ್ ಶಾಂತಾಯನ ಆ ಬಗೆಯವರಲ್ಲ. ವ್ಯಕ್ತಿಯೊಬ್ಬನ ಅಧ್ಯಯನ, ಪಾಂಡಿತ್ಯ, ಆಲೋಚನೆ, ಅನುಭೂತಿ, ಆಶಯ, ಅಭಿರುಚಿ ಎಲ್ಲಾ ಅವನ ನಿತ್ಯಜೀವನ ದಲ್ಲಿ ಪ್ರತಿಬಿಂಬಿಸದಿದ್ದರೆ ಅಂಥವನ ಜೀವನ ಮರಣಕ್ಕೆ ಸಮಾನವೆಂದು ಶಾಂತಾಯನರ ಸಿದ್ಧಾಂತ. ಜೀವನದೊಂದಿಗೆ ಸಂಬಂಧವಿಲ್ಲದ ವಿದ್ಯೆ ಅವಿದ್ಯೆ, ತರ್ಕ ಕುತರ್ಕ. ಸರ್ವ ವಿದ್ಯೆಗಳು, ಸರ್ವಶಾಸ್ತ್ರಗಳು, ಸರ್ವಕಲೆಗಳು ಜೀವನದಿಂದಲೇ ಉಗಮಗೊಂಡಂಥವು, ಜೀವನದಲ್ಲೇ ಬೆಳೆಯುವಂಥವು. ಕೊನೆಗೆ ಜೀವನಕ್ಕಾಗಿಯೇ ಬಾಳುವಂಥವು.

ಶಾಂತಾಯನರ ಕೃತಿಗಳ ಪೈಕಿ ಜರ್ಮನ್ ತತ್ತ್ವದಲ್ಲಿಯ ಅಹಂಕಾರವನ್ನು ಕುರಿತ Egotism in German Philosophy ಎಂಬುದೊಂದು. ಇದನ್ನು 1916ರಲ್ಲಿ ಬರೆದರು. ಈ ಪುಸ್ತಕದ ಕೊನೆಯ ಅಧ್ಯಾಯದಲ್ಲಿ ಶಾಂತಾಯನ ಬರೆದ ವಿಷಯದ ಸಾರಾಂಶ ಇದು : "ಅಹಂಕಾರ ಎಂಬ ಪದವನ್ನು ಆತ್ಮಾಭಿಮಾನದೊಂದಿಗೆ ಬೆರೆಸಬಾರದು. ಆತ್ಮಾಭಿಮಾನ ಎಲ್ಲ ಜೀವಿಗಳಿಗೂ ಸಹಜವಾದುದು. ಅಹಂಕಾರ ಅಂಥದಲ್ಲ, ಆತ್ಮಾಭಿಮಾನ ತನ್ನ ಹಿರಿಮೆಯನ್ನು ಗುರುತಿಸುವುದೇ ಹೊರತು ಬೇರೆ ಯವರನ್ನು ಸಣ್ಣದಾಗಿ ಕಾಣುವುದಿಲ್ಲ, ಆದರೆ ಅಹಂಕಾರ ತನ್ನ ಹಿರಿಮೆಯನ್ನು ಗುರು ತಿಸುತ್ತಾ ಬೇರೆಯವರ ಹಿರಿಮೆಯನ್ನು ಗುರುತಿಸದೆ ಸಣ್ಣತನದಿಂದ ನೋಡುವುದು. ಅಹಂಕಾರ ಸ್ವಾರ್ಥದಿಂದ ಕೂಡಿದ್ದು. ಆತ್ಮಾಭಿಮಾನಕ್ಕೆ ಸ್ವಾರ್ಥದ ಅವಶ್ಯಕತೆ ಇಲ್ಲ."

ಶಾಂತಾಯನ ಇಲ್ಲೊಂದು ಫ್ರೆಂಚ್ ಗಾದೆಯನ್ನು ಉಲ್ಲೇಖಿಸಿದರು. 'Je suits, done tu ne's pas' 'ಎಂದರೆ ನಾನು ಇದ್ದೇನೆ. ಆದ್ದರಿಂದ ನೀನಿಲ್ಲ."

ನಮ್ಮ ಜೀವನ ಇತರರ ಮರಣವನ್ನು ಆಧರಿಸಿದೆ ಎಂದೂ ಬೇರೆಯವರ ನಾಶ ದಿಂದಲೇ ನಮ್ಮ ಉಳಿವು ಸಾಧ್ಯವೆಂದೂ ಇನ್ನೊಬ್ಬರ ಸಮಾಧಿಯ ಮೇಲೆ ನಮ್ಮ ಸೌಧ ನಿಲ್ಲುವುದೆಂದೂ ಇದರರ್ಥ. ಈ ಸಂದರ್ಭದಲ್ಲೇ ಶಾಂತಾಯನ ಒಂದು ಕಡೆ ಜರ್ಮನ್ನರ ಅಹಂಕಾರಕ್ಕೂ ಭಾರತೀಯರ ಆತ್ಮವಾದಕ್ಕೂ ಇರುವ ವ್ಯತ್ಯಾಸವನ್ನು ತೋರಿಸಿದರು. ಜರ್ಮನರು ಹಾಗೂ ಭಾರತೀಯರು 'ಅಹಂ' ಎಂಬುದಕ್ಕೆ ಪ್ರಾಧಾನ್ಯ ಕೊಡುತ್ತಾರೆ. ಭಾರತೀಯರು ತಮ್ಮ 'ಅಹಂ' ಅನ್ನು ದೈವತ್ವದೊಂದಿಗೆ ಕೂಡಿಸಿ ದೈವತ್ವಕ್ಕೆ ಅಡ್ಡಿಬರುವ ತಮ್ಮ ಅಸುರ ಗುಣಗಳನ್ನು ನಿರ್ಮೂಲಗೊಳಿಸಿ ದೈವಗುಣ ಗಳನ್ನು ಅಳವಡಿಸಿಕೊಳ್ಳಲು ಯತ್ನಿಸುತ್ತಾರೆ. ಎಂದರೆ ಭಾರತೀಯರ 'ಅಹಂ' ಸ್ವಾರ್ಥದೂರವಾದುದು. ಆದರೆ ಜರ್ಮನರ 'ಅಹಂ' ಗರ್ವ, ಪ್ರತಾಪ, ಅಧಿಕಾರದಾಹ ಗಳಿಂದ ಕೂಡಿದ ಕೇವಲ ಸ್ವಪ್ರತಿಷ್ಠೆಗಾಗಿ ಯತ್ನಿಸುವಂಥದು. ಜರ್ಮನರ 'ಅಹಂ' ಸ್ವಪ್ರತಿಷ್ಠೆಗೆ ಅಡ್ಡಿಯಾಗುವ ಎಲ್ಲ ಶಕ್ತಿಗಳನ್ನು ನಿರ್ಮೂಲನಗೊಳಿಸಿ, ಇತರರ ಸಾಮರ್ಥ್ಯವನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳುತ್ತದೆ. ಭಾರತೀಯರ 'ಅಹಂ' ನಿರ್ಮಾಣಾತ್ಮಕ. ಜರ್ಮನರ 'ಅಹಂ' ನಿರ್ಮೂಲನಾತ್ಮಕ. ಭಾರತೀಯರ 'ಅಹಂ'ನ ತತ್ತ್ವ 'ಅಹಂ' ಅನ್ನು ನಾಶಮಾಡುವುದಾಗಿದ್ದರೆ ಜರ್ಮನರ 'ಅಹಂ'ನ ತತ್ತ್ವ 'ಅಹಂ' ಅನ್ನು ಬೆಳೆಸುವುದಾಗಿರುತ್ತದೆ. ಶಾಂತಾಯನ ಜರ್ಮನರ ತತ್ತ್ವಶಾಸ್ತ್ರದ 'ಅಹಂಕಾರ' ಎಂಬುದನ್ನು ಕುರಿತು ಬರೆದರೇ ಹೊರತು ಜರ್ಮನರನ್ನು ನಿಂದಿಸಲಿಲ್ಲ. ಅವರ ಪ್ರತಿಭೆ ಯನ್ನು ಪ್ರಶಂಸಿಸಿದರು ಕೂಡ. ಇದು ಕೇವಲ ತಾತ್ತ್ವಿಕ ವಿಮರ್ಶೆಯಷ್ಟೆ.

ಶಾಂತಾಯನ ಎಷ್ಟು ತಾತ್ತ್ವಿಕರೋ ಅಷ್ಟೇ ಕವಿ ಕೂಡ. ಅವರಲ್ಲಿ ಬುದ್ಧಿ ಜನಿತವಾದ ಆಲೋಚನೆ ಎಷ್ಟು ಕೆಲಸ ಮಾಡುತ್ತಿತ್ತೋ, ಹೃದಯಜನಿತವಾದ ಅನುಭೂತಿ ಕೂಡ ಅಷ್ಟೇ ಕೆಲಸಮಾಡುತ್ತಿತ್ತು. ತರ್ಕ, ರಸದೃಷ್ಟಿ ಇವೆರಡೂ ಅವ ರಲ್ಲಿ ಸಮಾನವಾಗಿ ಅರಳಿದುವು. ಅವರಲ್ಲಿದ್ದ ತಾತ್ತ್ವಿಕ ತತ್ತ್ವಶಾಸ್ತ್ರವನ್ನು ಬರೆದರೆ, ಅವರಲ್ಲಿದ್ದ ಕವಿ ಕಾವ್ಯ ಸೃಷ್ಟಿಸಿದ. 1894ರಲ್ಲಿ ಶಾಂತಾಯನ Sonnets and other poems ಎಂಬ ಕವನಸಂಕಲನ ಪ್ರಕಟಿಸಿದರು. ಅನಂತರ ಇನ್ನೂ ಕೆಲವು ಕವನಸಂಕಲನಗಳನ್ನು ಪ್ರಕಟಿಸಿದರು. ಅವರ ಕವಿತೆಗಳೆಲ್ಲ ಹೃದಯರಸದಿಂದ ತುಂಬಿ ಭಾವಾವೇಶದಿಂದ ತುಳುಕಾಡುತ್ತಿರುತ್ತವೆ. ಹಗುರವಾದ, ಬಲಹೀನವಾದ, ಅಸ್ಪಷ್ಟ ವಾದ ರಸಾನಂದ ಅವರಿಗೆ ತೃಪ್ತಿ ನೀಡುತ್ತಿರಲಿಲ್ಲ. ಅವರು ಬಲವಾದ, ಪರಿಪುಷ್ಟ ವಾದ ಸುಸ್ಪಷ್ಟವಾದ ರಸಾನುಭವವನ್ನು ಮಾತ್ರ ಅನುಭವಿಸುತ್ತಿದ್ದರು ; ಅಭಿವ್ಯಕ್ತಿ ಸುತ್ತಿದ್ದರು. ಅವರ ಕವಿತಾಕುಸುಮಗಳೆಲ್ಲ ಇಂಥ ಗಾಢ ಪರಿಮಳದಿಂದ ಕೂಡಿರು ತ್ತಿದ್ದುವು.

ಮಹಾಕವಿಗಳ ಪ್ರತಿಯೊಂದು ಕವಿತೆಯೂ ಸ್ವಲ್ಪಮಟ್ಟಿಗಾದರೂ ತಾತ್ತ್ವಿಕ ಅಂತರ್‌ದೃಷ್ಟಿಯನ್ನು ಪ್ರತಿಬಿಂಬಿಸುತ್ತದೆ. ಹಾಗೆಯೇ ಮಹಾತಾತ್ತ್ವಿಕರ ಪ್ರತಿ ಯೊಂದು ತತ್ತ್ವಸೂತ್ರವೂ ಸ್ವಲ್ಪಮಟ್ಟಿಗೆ ಕವಿತಾರಸವನ್ನು ಪ್ರತಿಧ್ವನಿಸುವುದು.

ನಿಜವಾದ ಕವಿಗಳೆಲ್ಲ ತಾತ್ತ್ವಿಕರೇ. ನಿಜವಾದ ತಾತ್ತ್ವಿಕರೆಲ್ಲ ಕವಿಗಳೇ. ಲಕ್ಷ್ಯ ಒಂದೇ, ಸಾಧನೆ ಮಾತ್ರ ಬೇರೆ. ಅದಕ್ಕೇ 'ನಾನೃಷಿಃ ಕುರುತೇ ಕಾವ್ಯಂ' ಎನ್ನಲಾಗಿದೆ. ಎಂದರೆ ಋಷಿ ಅಲ್ಲದವನು ಕಾವ್ಯ ಬರೆಯಲಾರ. ಇದು ಪ್ರಾಚೀನ ಕವಿಗಳಿಗಿಂತ ಅಭಿನವಕವಿಗಳಿಗೆ ಹೆಚ್ಚು ಅನ್ವಯವಾಗುವುದು. ಇಂದಿನ ರಮ್ಯಕವಿಗಳೆಂಬ ನವಯುಗ ಕವಿಗಳಲ್ಲೇ ಪ್ರಾಚೀನ ಕವಿಗಳಿಗಿಂತ ಹೆಚ್ಚಿನ ತಾತ್ತ್ವಿಕದೃಷ್ಟಿ ಇರುವುದನ್ನು ಒಪ್ಪಿಕೊಳ್ಳಲೇಬೇಕು. ಆಧುನಿಕ ತಾತ್ತ್ವಿಕರೆಲ್ಲರೂ ಕವಿಗಳಾಗದಿರಬಹುದು; ಆಧುನಿಕ ಕವಿಗಳು ಮಾತ್ರ ತಾತ್ತ್ವಿಕರಂತೆ ಕಾಣುತ್ತಿದ್ದಾರೆ. ಉತ್ತಮ ದಾರ್ಶನಿಕ, ಉತ್ತಮ ಕವಿ ಒಬ್ಬ ವ್ಯಕ್ತಿಯಲ್ಲೇ ಒಂದುಗೂಡಿರುವುದು ವಿರಳ. ಆ ವಿರಳವ್ಯಕ್ತಿ ಜಾರ್ಜ್ ಶಾಂತಾಯನ. ಶಾಂತಾಯನ ಸ್ಪೇನ್ ದೇಶದವರಾದರೂ ತಮ್ಮ ರಚನಾವ್ಯಾಸಂಗವನ್ನು ಇಂಗ್ಲಿಷ್‌ನಲ್ಲೇ ನಡೆಸಿದರು.

ಭಾವಾವೇಶ ರಸಧಾರೆಯಲ್ಲಿ ಬಿದ್ದು ದಿಕ್ಕುದೆಸೆಯಿಲ್ಲದೆ ಕೊಚ್ಚಿಕೊಂಡು ಹೋಗುವ ಜೀವನನೌಕೆಗೆ ದಾರಿತೋರುವುದು ವಿಚಾರವಾದ. ಸಹಜಾನುಭೂತಿ ಎಷ್ಟು ಸರಿಯಾದ ಮಾರ್ಗದಲ್ಲಿ ನಡೆದರೂ ವಿಚಾರದೃಷ್ಟಿ ಲೋಪವಾದರೆ ಸತ್ಯ ಮರೆಯಾಗುವುದು. ಅದಕ್ಕೆ ಜಾರ್ಜ್ ಶಾಂತಾಯನ ಏಳು ವರ್ಷ ದುಡಿದು ವಿಚಾರವಾದವನ್ನು ಕುರಿತಂತೆ ಈ ಶತಮಾನದ ಆದಿಯಲ್ಲಿ ಐದು ಸಂಪುಟಗಳನ್ನು ಪ್ರಕಟಿಸಿದರು. ಅವು : Reason in Commonsense, Reason in Society, Reason in Religion, Reason in Art, Reason in Science. ಸಾಮಾನ್ಯ ವ್ಯವಹಾರದಲ್ಲಿ, ಸಮಾಜದಲ್ಲಿ, ಧರ್ಮದಲ್ಲಿ, ಕಲೆಯಲ್ಲಿ, ಶಾಸ್ತ್ರದಲ್ಲಿ, ಕಾರಣ ಅಥವಾ ವಿಚಾರದ ಪ್ರಾಧಾನ್ಯವನ್ನು ಕುರಿತು ಈ ಐದು ಸಂಪುಟಗಳಲ್ಲಿ ಹೇಳಲಾಗಿದೆ. ವಿಚಾರ ಲೋಪದಿಂದ, ವ್ಯವಹಾರದಿಂದ ಶಾಸ್ತ್ರದವರೆಗೆ ಎಲ್ಲವೂ ಕತ್ತಲಲ್ಲೇ ಮುಳುಗಿರುತ್ತವೆ. ವಿಚಾರದೃಷ್ಟಿಯ ಲೋಪದಿಂದಲೇ ಪ್ರಪಂಚದಲ್ಲಿ ಈ ಯುದ್ಧ, ದುಷ್ಪರಿಣಾಮ.

ಮೇಲಿನ ಐದು ಸಂಪುಟಗಳು ಜಾರ್ಜ್ ಶಾಂತಾಯನ ಅವರಿಗೆ ಪ್ರಪಂಚದಲ್ಲಿ ಅಪಾರ ಖ್ಯಾತಿಯನ್ನು ಗಳಿಸಿಕೊಟ್ಟವು. ಇವು ಕೇವಲ ತಾತ್ವಿಕ ರಚನೆಗಳಲ್ಲ. ಏಕೆಂದರೆ ಇವು ಸಾಹಿತ್ಯ ಸೌರಭಪೂರಿತವಾದಂಥವು. ಹೋಗಲಿ, ಇವುಗಳನ್ನು ಸಾಹಿತ್ಯರಚನೆಗಳೆನ್ನೋಣ ಎಂದರೆ ತತ್ತ್ವಶಾಸ್ತ್ರದ ಶಂಖರವ ಮೊಳಗುತ್ತಿರುತ್ತದೆ. ಈ ಐದು ಸಂಪುಟಗಳನ್ನು ರಚಿಸುವ ಮುನ್ನ ಅವರು The Sense of Beauty ಮತ್ತು Interpretation of Poetry and Religion ಎಂಬ ಕೃತಿಗಳನ್ನೂ ರಚಿಸಿದ್ದರು. ಅವರ ಸಮಕಾಲೀನರಾದ ಬರ್ಟ್ರೆಂಡ್ ರಸೆಲ್, ಆನಂದಕುಮಾರಸ್ವಾಮಿ, ಸುರೇಂದ್ರನಾಥ ದಾಸಗುಪ್ತ, ರಾಧಾಕೃಷ್ಣನ್‌ರಂಥ ತಾತ್ತ್ವಿಕ ಶಿಖಾಮಣಿಗಳ ಕೃತಿಗಳ ಸಂಖ್ಯೆಗೆ ಹೋಲಿಸಿದರೆ ಶಾಂತಾಯನ ರಚಿಸಿದ ಗ್ರಂಥಗಳ ಸಂಖ್ಯೆ ದೊಡ್ಡದೇನಲ್ಲ. ಒಬ್ಬರ ಹಿರಿಮೆಗೆ ಸಂಖ್ಯೆ ಒಂದೇ ಅಳತೆಗೋಲಲ್ಲ; ಸಾರವೇ ಅತಿ ಮುಖ್ಯ.

ಶಾಂತಾಯನ ತಮ್ಮ ಜೀವನದಲ್ಲಿ The last Puritan ಎಂಬ ಒಂದೇ ಒಂದು

ಕಾದಂಬರಿ ಬರೆದರು. ಇದರಲ್ಲಿ ಅವರ ಆತ್ಮಜೀವನದ ನೆರಳು ಪ್ರತಿಬಿಂಬಿತವಾಗಿದೆ ಎಂಬ ಪ್ರತೀತಿ ಇದೆ. ಇದು ಬಹುಪಾಲು ಆಲ್ಡಸ್ ಹಕ್ಸ್ಲೀ ಅವರ ಕಾದಂಬರಿಗಳನ್ನು ಹೋಲುತ್ತದೆ. ವಿಚಾರವಾದದಲ್ಲಿ ಹೆಚ್ಚು ಒಲವಿದ್ದವರು ಕಲ್ಪನಾಲೋಕದಲ್ಲಿ ವಿಹಾರ ಮಾಡಲು ಸಾಧ್ಯವಿಲ್ಲ. ಇಂಥವರಿಗೆ ಕಾದಂಬರಿಯ ರಚನೆ ಕಷ್ಟಸಾಧ್ಯ.

ಸಾಂತಾಯನ ಬರೆದ ಕೊನೆಯ ತಾತ್ತ್ವಿಕ ಗ್ರಂಥ Dominations and Powers. ಇದರಲ್ಲಿ ಕೆಲವು ಕಡೆ ಇಂದಿನ ರಾಜಕೀಯಗಳನ್ನು ಕುರಿತು ಕೂಡ ಚರ್ಚಿಸಿದರು. ಇದರಲ್ಲಿ ಭಾವಗಾಂಭೀರ್ಯಕ್ಕೆ ಮಾತ್ರವಲ್ಲದೆ ರೂಪಸೌಂದರ್ಯಕ್ಕೂ ಪ್ರಾಧಾನ್ಯ ಕೊಟ್ಟರು. ಪ್ರಪಂಚದ ಪ್ರತಿಯೊಂದು ವಿಷಯದಲ್ಲೂ ರೂಪದ ಸಮರ್ಪಕತೆ ಇರಬೇಕೆಂದು ಪ್ರತಿಪಾದಿಸಿದರು. "ಅತ್ಯಲ್ಪ ಕಾಲ ಬಾಳುವ ವಿಷಯದಲ್ಲಾದರೂ ಅದರ ಶಕ್ತಿಯಲ್ಲಿ ಸಮರ್ಪಕತೆಯನ್ನು ಪಡೆಯುವುದರಲ್ಲೇ ಜೀವನದ ವಿಜಯ ಅಡಗಿದೆ. ಈ ಸಮರ್ಪಕತೆಯನ್ನು ಪಡೆಯುವ ಅಂಗನಿರ್ಮಾಣ ಎಷ್ಟು ಹೆಚ್ಚು ಮೇಲ್ತರವಾಗಿ, ಎಷ್ಟು ಕಡಿಮೆ ಗೋಜಲಾಗಿದ್ದರೆ ಅಷ್ಟು ಹೆಚ್ಚು ಮಹಿಮಾನ್ವಿತವಾಗಿ ಅದರ ಸಮರ್ಪಕತೆ ಇರುತ್ತದೆ. ಸುಂದರ ವಸ್ತುವನ್ನು ಪಡೆಯಲು ಪ್ರಪಂಚದಲ್ಲಿ ಹರಮತ್ತಿರುವ ವಿರೂಪವನ್ನೆಲ್ಲ ನಾಶ ಮಾಡಲು ಬಯಸುತ್ತೇನೆ" ಎಂದರು ಸಾಂತಾಯನ. ಇಲ್ಲಿ ಸಾಂತಾಯನರಲ್ಲಿರುವ ತಾತ್ತ್ವಿಕನಿಗೆ ಬದಲಾಗಿ ಅವರಲ್ಲಿರುವ ಕಲಾವಿದ ಎಚ್ಚೆತ್ತಿದ್ದಾನೆ.

ಜಾರ್ಜ್ ಸಾಂತಾಯನ ಅಂತರ್ಜಗತ್ತಿಗೆ ಪ್ರಾಧಾನ್ಯ ಕೊಟ್ಟು ಬಾಹ್ಯಜಗತ್ತನ್ನು ನಿರ್ಲಕ್ಷ್ಯ ಮಾಡಿದವರಲ್ಲ. ಸೂಕ್ಷ್ಮ ಜಗತ್ತಿಗೆ ಎಷ್ಟು ಬೆಲೆ ಕೊಟ್ಟರೋ ಸ್ಥೂಲ ಜಗತ್ತಿಗೂ ಅಷ್ಟೇ ಬೆಲೆ ಕೊಟ್ಟರು. ಅವರಿಗೆ ಅತೀಂದ್ರಿಯ ವಿಷಯಗಳಲ್ಲಿ ಎಷ್ಟು ಪ್ರೀತಿ ಇದೆಯೋ, ಇಂದ್ರಿಯಗ್ರಾಹ್ಯ ವಿಷಯಗಳೂ ಅಷ್ಟೇ ಪ್ರಿಯ. ಅವರ ರೋಮ್‌ನಗರದಲ್ಲಿ ಕಳೆದ ಅವರ ಜೀವನದ ಅಂತ್ಯಕಾಲದಲ್ಲಿ ಈ ಅಂತರ್, ಬಹಿರ್, ಸ್ಥೂಲ, ಸೂಕ್ಷ್ಮ ತೂಕದ ಸಾಮರಸ್ಯಕ್ಕೆ ಸ್ವಲ್ಪ ಭಂಗವಾದಂತೆ ಕಾಣುತ್ತದೆ. ಕೊನೆಯ ದಿನಗಳಲ್ಲಿ ಅವರ ಒಲವು ಸ್ಥೂಲಕ್ಕಿಂತ ಸೂಕ್ಷ್ಮದ ಕಡೆಗೆ, ಬಾಹ್ಯಕ್ಕಿಂತ ಆಂತರ್ಯದ ಕಡೆಗೆ, ಇಂದ್ರಿಯ ಗ್ರಾಹ್ಯಗಳಿಗಿಂತ ಅತೀಂದ್ರಿಯಗಳ ಕಡೆಗೆ ಹರಿಯಿತು. ಇದು ಸಹಜವೇ. ಭೌತಿಕ ಲೋಕದ ಅನುಭವ ಮಾಗಿದಷ್ಟು ಮನುಷ್ಯನ ಇಷ್ಟ ಅದಕ್ಕಿಂತ ಹೆಚ್ಚು ಸೂಕ್ಷ್ಮವಾದ ಪದರುಗಳ ಕಡೆಗೆ ಹರಿಯುತ್ತದೆ. ಅಂತರ್ಜಗತ್ತು ಬಾಹ್ಯ ಜಗತ್ತಿನ ಅವಸ್ಥಾಭೇದವೇ ಹೊರತು ಅಸ್ತಿತ್ವಭೇದ ಅಲ್ಲ. ಆದ್ದರಿಂದಲೇ ಜಾರ್ಜ್ ಸಾಂತಾಯನ ತಮ್ಮ ಜೀವನದ ಅಸ್ತಿತ್ವದ ಸ್ಥೂಲತೆಯಿಂದ ಸೂಕ್ಷ್ಮತೆಯ ಕಡೆಗೆ ಪಯಣಿಸಲು ಸಾಧ್ಯವಾಯಿತು. ಅವರೀಗ 'ಅಶರೀರಿ'. ಆದರೂ ಮಹತ್ತ್ವದ ರಚನೆಗಳಿಂದ 'ಸಶರೀರಿ' ಆಗಿದ್ದಾರೆ. 1952 ಸೆಪ್ಟೆಂಬರ್‌ನಲ್ಲಿ ಜಾರ್ಜ್ ಸಾಂತಾಯನ ನಿಧನರಾದರು.

# ಬ್ರೆಕ್ಟ್ : ಕೆಲವು ವಿಚಾರಗಳು

ಎ. ಆರ್. ನಾಗಭೂಷಣ

ನಾಟಕ ಸಾಹಿತ್ಯ ಮತ್ತು ರಂಗಭೂಮಿಗಳೆರಡನ್ನೂ ಆಮೂಲಾಗ್ರವಾಗಿ ವಿವೇಚಿಸಿ, ರಂಗಶಾಸ್ತ್ರದ ಹುಟ್ಟಿಗೆ ಕಾರಣಕರ್ತರಾದ ಭರತ ಮತ್ತು ಅರಿಸ್ಟಾಟಲ್ ಇವರ ಗುಂಪಿಗೆ ಸೇರಿದವನು ಬರ್ಟೋಲ್ಟ್ ಬ್ರೆಕ್ಟ್. ನಾಟಕವನ್ನು ಕುರಿತಂತೆ ಪ್ರಮುಖ ಸಿದ್ಧಾಂತಕಾರನಾದ ಇವನು ಸ್ವತಃ ನಾಟಕಕಾರನೂ ರಂಗಕರ್ಮಿಯೂ ಆಗಿರುವುದು ಇವನ ವಿಶಿಷ್ಟತೆ. ಈ ಶತಮಾನದ ನಾಟಕರಂಗದಲ್ಲಾದ ಕ್ರಾಂತಿಕಾರಕ ಬದಲಾವಣೆಗಳ ಮೂಲಪುರುಷ ಇವನು ಎಂದು ಖಚಿತವಾಗಿ ಹೇಳಬಹುದು.

ಬ್ರೆಕ್ಟ್‌ನ ತಾತ್ವಿಕತೆ. ನಾಟಕಗಳ ರಚನಾಕ್ರಮ ಮತ್ತು ರಂಗಪ್ರಯೋಗವನ್ನು ಕುರಿತ ಚಿಂತನೆಗಳಿಗೆ ಸಂಬಂಧಪಟ್ಟಂತೆ ಕೆಲವು ಮೂಲಭೂತ ವಿಚಾರಗಳನ್ನು ಗುರುತಿಸಲು ಈ ಲೇಖನದಲ್ಲಿ ಪ್ರಯತ್ನಿಸಲಾಗಿದೆ.

ರಾಜಕೀಯವಾಗಿ ಮಾರ್ಕ್ಸ್‌ವಾದೀ ಧೋರಣೆಗಳನ್ನು ಬ್ರೆಕ್ಟ್‌ನ ನಾಟಕಗಳು ಅಭಿವ್ಯಕ್ತಿಸುತ್ತವೆ. ಆದರೆ ಇವರ ಪ್ರತಿಪಾದನೆಗಾಗಿ ಇವನು ನಾಟಕಗಳನ್ನು ಕೇವಲ ಬೋಧನೆಯ ಮಾಧ್ಯಮವನ್ನಾಗಿ ಬಳಸಲಿಲ್ಲ. ಬದಲಾಗಿ, ಕಲಾವಂತಿಕೆಯನ್ನೂ ತಾತ್ತ್ವಿಕತೆಯನ್ನೂ ಒಂದು ಸಮತೋಲನದ ಹದದಲ್ಲಿ ಬೆಸೆದು ಯಶಸ್ವಿಯಾದ. ಇವನ ಕೆಲವು ಶ್ರೇಷ್ಠ ನಾಟಕಗಳಲ್ಲಿ ಇವೆರಡೂ ಒಂದೇ ಆಗಿದೆ. ಇವುಗಳು ರಂಜನೆಯನ್ನು ನೀಡುತ್ತಲೇ ರಾಜಕೀಯ ತಿಳಿವಳಿಕೆಯನ್ನು ಸಂವಹನಿಸುತ್ತವೆ. ಸಮಾಜದ ಪ್ರತಿಯೊಂದು ಅಂಶವೂ ಆರ್ಥಿಕ ಸಂಬಂಧಗಳ ತಳಹದಿಯ ಮೇಲೆ ರೂಪುಗೊಳ್ಳುತ್ತದೆ ಮತ್ತು ಬಂಡವಾಳಶಾಹಿ ವ್ಯವಸ್ಥೆ ಎಲ್ಲ ಮಾನವೀಯ ಮೌಲ್ಯಗಳನ್ನು ಕೊಲ್ಲುತ್ತದೆ ಎಂಬುದು ಇವನ ವೈಚಾರಿಕ ನಿಲುವುಗಳು. ಈ ಶತಮಾನದ ಯೂರೋಪಿನಲ್ಲಿ, ಮುಖ್ಯವಾಗಿ ಹಿಟ್ಲರನ ಕಾಲದ ಜರ್ಮನಿಯಲ್ಲಿ, ಅಸ್ತವ್ಯಸ್ತವಾಗಿದ್ದ ಸಾಮಾಜಿಕ–ರಾಜಕೀಯ–ಆರ್ಥಿಕ ಪರಿಸ್ಥಿತಿಗಳ ಒತ್ತಡದಲ್ಲಿ ಮನುಷ್ಯ ಜೀವ ನರಳುತ್ತಿದ್ದುದನ್ನು ತೀವ್ರ ನೋವಿನಿಂದ ಇವನು ಗಮನಿಸಿದ. ಮನುಷ್ಯನ ಪರಿಸ್ಥಿತಿ ಬದಲಾಗುತ್ತದೆ, ಬದಲಾಗಬೇಕು ಎಂಬ ನಂಬಿಕೆಯನ್ನು ಬೆನ್ನೆಲುಬಾಗಿಟ್ಟುಕೊಂಡು ಸೃಜನಶೀಲ ಚಟು

ಘಟಕಗಳಲ್ಲಿ ಕ್ರಿಯಾಶೀಲನಾದ. ಬದಲಾವಣೆ ಮತ್ತು ಪರಸ್ಪರ ಸಹಕಾರ ಬ್ರೆಕ್ಟ್‌ನ ಪ್ರಮುಖ ವೈಯುಕ್ತಿಕ ಹಾಗೂ ರಾಜಕೀಯ ತತ್ತ್ವಗಳು. ಇವನಿಗೆ ಮನುಷ್ಯ ಕೇವಲ ವ್ಯಕ್ತಿಯಾಗಲ್ಲದೆ, ಎಲ್ಲ ಸಾಮಾಜಿಕ ಸಂದರ್ಭಗಳ ಮೊತ್ತವಾಗಿ ಕಾಣಿಸಿದ. ಇಂತಹ ಮನುಷ್ಯನ ಬದಲಾಗುವ ಸಾಮರ್ಥ್ಯ ಹಾಗೂ ಸಮಾಜವನ್ನು ಬದಲಾಯಿಸುವ ಶಕ್ತಿ ಇವರಡೂ ಇವನ ಬಲು ದೊಡ್ಡ ಆಶಾಭಾವನೆಗಳಾಗಿದ್ದವು.

ಅರಿಸ್ಟಾಟಲ್ ಪ್ರಣೀತ ರಂಗಶಾಸ್ತ್ರಕ್ಕೆ ವಿರುದ್ಧದ ನೆಲೆಯಲ್ಲಿ ಬ್ರೆಕ್ಟ್ ತನ್ನ ನಾಟಕಗಳನ್ನು ರಚಿಸಿದ. ಪಾರಂಪರಿಕ ನಾಟಕಗಳ ರಚನಾತಂತ್ರಗಳನ್ನು ಇವನು ಪ್ರಜ್ಞಾಪೂರ್ವಕವಾಗಿ ಧಿಕ್ಕರಿಸಿದ. ಹಳೆಯ ನಾಟಕಗಳಲ್ಲಿ ಸಾಮಾನ್ಯವಾಗಿ ಈ ಕೆಲವು ಲಕ್ಷಣಗಳಿರುತ್ತವೆ : ಸ್ಪಷ್ಟವಾದ ಕಥಾಸಂವಿಧಾನ, ದೃಶ್ಯಗಳ ತಾರ್ಕಿಕ ಬೆಳವಣಿಗೆ, ಸರಳ ರೇಖೆಯಂತಹ ನಡೆ, ಬಳಸು ಮಾರ್ಗದ ಸಂವಹನ ಪ್ರಕ್ರಿಯೆ, ನಿಗಮನ ಪದ್ಧತಿಯ ರಚನೆ, ಭಾವನೆಗಳ ಮೇಲೆ ಒತ್ತು, ಭದ್ರವಾದ ಕಾಲದೇಶಗಳ ನೆಲೆ, ಆಶಯಕ್ಕೆ ಪೂರಕವಾಗುವ ವಿವರಗಳ ವಿನ್ಯಾಸ, ಪರಾಕಾಷ್ಠೆಯ ದಿಕ್ಕಿನೆಡೆಗೆ ದೃಶ್ಯಗಳ ಓಟ, ವಾಸ್ತವ ವಿವರಗಳ ಮೂಲಕ ಭ್ರಮಾಪ್ರಪಂಚದ ನಿರ್ಮಾಣ, ಚಿಂತನೆಯಿಂದ ಮನುಷ್ಯನ ಮೇಲೆ ಹಿಡಿತ, ಪಾತ್ರಗಳ ವ್ಯಕ್ತಿತ್ವಕ್ಕೆ ಅನುಗುಣವಾದ ಘಟನೆಗಳು ಇತ್ಯಾದಿ. ಇವುಗಳಿಗೆ ತದ್ವಿರುದ್ಧವಾದ ಲಕ್ಷಣಗಳು ಬ್ರೆಕ್ಟ್‌ನ ನಾಟಕಗಳಲ್ಲಿ ಕಾಣುತ್ತವೆ : ಕಥನ ಪ್ರಧಾನತೆ, ಹಿಂದಮುಂದೆ ನೆಗೆಯುವ ಆದರೆ ಸ್ವಯಂಪೂರ್ಣವಾದ ದೃಶ್ಯಗಳು, ವರ್ತುಲಾಕಾರದ ನಡೆ, ಚಿಂತನೆಯ ಮೇಲೆ ಒತ್ತು, ಅನುಗಮನ ಪದ್ಧತಿಯ ರಚನೆ, ವಿವರಗಳಿಂದ ಆಶಯ–ವೈಚಾರಿಕತೆಗಳ ಮೂರ್ತರೂಪ, ಘಟನೆಗಳಿಂದ ರೂಪುಗೊಳ್ಳುವ ಪಾತ್ರಗಳ ವ್ಯಕ್ತಿತ್ವ, ಭ್ರಮಾಪ್ರಪಂಚ ನಿರ್ಮಾಣವಾಗದಂತೆ ಎಚ್ಚರ, ಮನುಷ್ಯನಿಂದ ಚಿಂತನೆಯ ಮೇಲೆ ಹಿಡಿತ ಇತ್ಯಾದಿ. ಹೀಗೆ ಪಾರಂಪರಿಕ ನಾಟಕಗಳಿಂದ ಸಂಪೂರ್ಣವಾಗಿ ಭಿನ್ನವಾದ ನಾಟಕಗಳನ್ನು ರಚಿಸಿದವನು ಬ್ರೆಕ್ಟ್. ಸಮಾಜದ ಚಲನಶೀಲತೆಯನ್ನೂ ಜಗತ್ತು ಹೊಸ ದಿಕ್ಕಿನೆಡೆಗೆ ಹೊರಳುತ್ತದೆಂಬುದನ್ನೂ ಪ್ರಕಾಶಪಡಿಸುವುದೇ ಇವನ ಪ್ರಧಾನ ಆಶಯ. ಇದನ್ನು ಸಾಧಿಸುವ ಹಾದಿಯಲ್ಲಿ ಬೌದ್ಧಿಕ ವಾದಗಳನ್ನು ಒಣಪಾಂಡಿತ್ಯವೆನ್ನಿಸದ ರೀತಿಯಲ್ಲಿ ಇವನು ಮಂಡಿಸುತ್ತಾನೆ. ಷೇಕ್ಸ್‌ಪಿಯರನ ನಾಟಕಗಳೊಂದಿಗೆ ಇವನ 'ದಿ ಕಕೇಷಿಯನ್ ಚಾಕ್ ಸರ್ಕಲ್', 'ಮದರ್ ಕರೇಜ್', 'ದಿ ಗುಡ್ ವುಮನ್ ಆಫ್ ಸೆಜುವಾನ್', 'ಪುಂಟಿಲಾ' ಮುಂತಾದ ನಾಟಕಗಳನ್ನು ಹೋಲಿಸಿದರೆ ಇವನ ನಾಟಕ ರಚನಾ ತಂತ್ರಗಳ ಬಗ್ಗೆ ನಿಚ್ಚಳವಾದ ಒಳನೋಟಗಳು ಲಭ್ಯವಾಗುತ್ತವೆ.

ರಂಗಪ್ರಯೋಗದ ವಿವಿಧ ಆಯಾಮಗಳ ಬಗ್ಗೆ ಅತ್ಯಂತ ವ್ಯಾಪಕವಾಗಿ ಬ್ರೆಕ್ಟ್ ಚರ್ಚಿಸಿದ್ದಾನೆ. ವಾಸ್ತವವಾದೀ ರಂಗಭೂಮಿಯನ್ನು ನಿರಾಕರಿಸಿ ರೂಪುಗೊಂಡ ಇವನ ರಂಗವಿಚಾರಗಳು ಕೇವಲ ತೋರಿಕೆಯ ಬದಲಾವಣೆಗಳಲ್ಲ. ಇವುಗಳ ಹಿಂದೆ ಒಂದು ಸೈದ್ಧಾಂತಿಕ ಚೌಕಟ್ಟಿದೆ. ಪ್ರೇಕ್ಷಕರು ತಮ್ಮ ಸಾಮಾಜಿಕ ಗತಿಸ್ಥಿತಿಗಳ ಬಗ್ಗೆ

ಅರಿವು ಮೂಡಿಸಿಕೊಂಡು ಬದಲಾವಣೆಯ ಬಗ್ಗೆ ಚಿಂತಿಸಲು ಪ್ರೇರೇಪಿಸುವಂತೆ ನಾಟಕದ ಪ್ರಯೋಗ ನಡೆಯಬೇಕೆಂಬ ಅಪೇಕ್ಷೆ ಬ್ರೆಕ್ಟ್‌ನದು. ವಾಸ್ತವವಾದೀ ರಂಗಭೂಮಿಯ ಬಗ್ಗೆ ಇವನು ಉಗ್ರವಾದ ಟೀಕೆಯನ್ನು ಮಾಡಿದ್ದಾನೆ. ಕಾರಣ, ಇದು ಪ್ರೇಕ್ಷಕರನ್ನು ಭ್ರಮೆಯ ಜಗತ್ತಿನಲ್ಲಿ ಮುಳುಗಿಸಿಬಿಡುತ್ತದೆ. ಹೀಗಾದಾಗ, ಅವರ ಚಿಂತನಾಶಕ್ತಿ ಮರೆಯಾಗಿಬಿಡುತ್ತದೆ. ಹೀಗಾಗಬಾರದೆಂದು ಬ್ರೆಕ್ಟ್ ತನ್ನದೇ ಆದ ರಂಗ ಸಿದ್ಧಾಂತವನ್ನು 'ಎಪಿಕ್ ರಂಗಭೂಮಿ' ಎಂಬ ಹೆಸರಿನಡಿಯಲ್ಲಿ ಪ್ರಕಟಪಡಿಸಿದ್ದಾನೆ. ಮೊಟ್ಟಮೊದಲನೆಯದಾಗಿ, ನಾಟಕ ಭ್ರಮಾಪ್ರಪಂಚವನ್ನು ಸೃಷ್ಟಿಸಬಾರದು. ಪ್ರೇಕ್ಷಕರಿಗೆ ತಾವು ನೋಡುತ್ತಿರುವುದು ನಾಟಕವೇ ಹೊರತು ನಿಜಜೀವನವಲ್ಲ ಎಂಬ ಎಚ್ಚರ ಸದಾ ಇರುವಂತೆ ಪ್ರಯೋಗ ನಡೆಯಬೇಕು. ಅವರನ್ನು ಭಾವಪರವಶತೆಗೆ ತಳ್ಳದೆ, ಚಿಂತನಶೀಲರಾಗುವಂತೆ ಪ್ರಚೋದಿಸಬೇಕು. ನಾಟಕದ ಕ್ರಿಯೆಯಲ್ಲಿ ಮುಳುಗಿಹೋಗಲು ಬಿಡದೆ, ವೈಚಾರಿಕ ಸಂಘರ್ಷದಲ್ಲಿ ಕ್ರಿಯಾಶೀಲರಾಗುವಂತೆ ಸಿದ್ಧಗೊಳಿಸಬೇಕು. ಇವೆಲ್ಲವನ್ನು ಸಾಧಿಸಲು ಬ್ರೆಕ್ಟ್ ಹಲವಾರು ಮಾರ್ಗೋಪಾಯಗಳನ್ನು ಸೂಚಿಸಿದ್ದಾನೆ. ಇದರಲ್ಲಿ ಬಹುಮುಖ್ಯವಾದುದು ನಟನಾಶೈಲಿ. ನಟರು ರಂಗದ ಮೇಲೆ ತಮ್ಮ ಪಾತ್ರಗಳಲ್ಲಿ ತಲ್ಲೀನರಾಗದೆ, ದೂರವನ್ನು ಕಾಯ್ದುಕೊಂಡು ಪಾತ್ರಗಳನ್ನು ಪ್ರತಿನಿಧಿಸಬೇಕೆಂದು ಬ್ರೆಕ್ಟ್ ಅಪೇಕ್ಷೆಪಟ್ಟಿದ್ದಾನೆ. ಎಪಿಕ್ ರಂಗಭೂಮಿಯ ನಟನೆಯಲ್ಲಿ ನಾಟಕದ ವಸ್ತುವಿನ ಬಗ್ಗೆ ನಟರು ವಿಮರ್ಶಾತ್ಮಕ ದೃಷ್ಟಿಕೋನವನ್ನು ವ್ಯಕ್ತಪಡಿಸುತ್ತಾರೆ ; ಉದ್ರೇಕಕಾರಿ ಮಾತು–ಮುಖಭಾವಗಳಿಗೆ ಬದಲಾಗಿ ಸಂಜ್ಞೆಗಳನ್ನು ಬಳಸುತ್ತಾರೆ. ಪಾತ್ರಗಳೊಡನೆ ತಾದಾತ್ಮ್ಯತೆ ಉಂಟಾಗಬಹುದಾದ ಸಾಧ್ಯತೆಯನ್ನು ಮುರಿಯಲು ನಟರಿಂದ ರಂಗನಿರ್ದೇಶನಗಳನ್ನು ಹೇಳಿಸುವುದು, ಸಂಭಾಷಣೆಯಲ್ಲಿ ತೃತೀಯ ಪುರುಷ ಸರ್ವನಾಮಗಳನ್ನೂ ಭೂತಕಾಲದ ಭಾಷೆಯನ್ನೂ ಬಳಸುವುದು, ಪ್ರೇಕ್ಷಕರೊಂದಿಗೆ ನೇರವಾಗಿ ಮಾತನಾಡುವುದು ಮುಂತಾದ ತಂತ್ರಗಳನ್ನು ಉಪಯೋಗಿಸಬಹುದೆಂದು ಬ್ರೆಕ್ಟ್ ಸೂಚಿಸಿದ್ದಾನೆ. ಒಟ್ಟಾರೆ, ನಟರು ತಮ್ಮ ಪಾತ್ರಗಳ ಜೊತೆ ಅಂತರವನ್ನು ಸದಾ ಎಚ್ಚರದಿಂದ ಕಾಯ್ದುಕೊಳ್ಳಬೇಕು. ಇದರಿಂದಾಗಿ ಪ್ರೇಕ್ಷಕರು ನಾಟಕದ ಕ್ರಿಯೆ–ಪಾತ್ರಗಳ ಜೊತೆ ಅಂತರವನ್ನು ಕಾಯ್ದುಕೊಳ್ಳಲು ಸಾಧ್ಯವಾಗುತ್ತದೆ. ಇದನ್ನು ಬ್ರೆಕ್ಟ್ 'ಏಲಿಯನೇಷನ್ ಇಫೆಕ್ಟ್' (ದೂರೀಕರಣ ಅಥವಾ ಪರಕೀಯತೆ) ಎಂದು ಕರೆದಿದ್ದಾನೆ. ಇದನ್ನು ಒಂದು ಬೀದಿ ಬದಿಯ ದೃಶ್ಯದ ಮೂಲಕ ಸ್ಪಷ್ಟಗೊಳಿಸಿದ್ದಾನೆ. ಬೀದಿಯಲ್ಲಿ ಸಂಭವಿಸಿದ ಒಂದು ಘಟನೆಯನ್ನು ಒಬ್ಬ ವ್ಯಕ್ತಿ ಇತರರಿಗೆ ನಿರೂಪಿಸುತ್ತಾನೆ. ಆ ಘಟನೆಯಲ್ಲಿ ಭಾಗಿಗಳಾದ ಎಲ್ಲರ ವಿಚಾರಗಳನ್ನು ಇವನು ಪರಿಚಯಿಸುತ್ತಾನೆ. ಆದರೆ ಯಾರು ಸರಿ, ಯಾವುದು ಸರಿ ಎಂದು ತನ್ನ ದೃಷ್ಟಿಕೋನವನ್ನು ಕೇಳುಗರ ಮೇಲೆ ಹೇರುವುದಿಲ್ಲ. ಎಲ್ಲವನ್ನು ಕೇಳಿದ ಮೇಲೆ ಕೇಳುಗರು ಸರಿತಪ್ಪುಗಳ ಬಗ್ಗೆ ತಮ್ಮ ಮನಸ್ಸಿನಲ್ಲಿ ವಾಗ್ವಾದಕ್ಕೆ

ತಯಾರಾಗುತ್ತಾರೆ. ಇಂತಹ ಸ್ಥಿತಿ ಎಪಿಕ್ ರಂಗಭೂಮಿಯಲ್ಲಿ ಸಾಧ್ಯವಾಗ ಬೇಕೆಂಬುದು ಬ್ರೆಕ್ಟ್‌ನ ಅಪೇಕ್ಷೆ.

ಪ್ರೇಕ್ಷಕರ ಭಾವಪರವಶತೆಯನ್ನು ತೊಡೆದುಹಾಕುವುದು ತಾಂತ್ರಿಕ ಪರಿಕರಗಳ ಜಾಣ ಉಪಯೋಗದಿಂದಲೂ ಸಾಧ್ಯವೆಂದು ಬ್ರೆಕ್ಟ್ ಹೇಳಿದ್ದಾನೆ. ಇವನ ಅಭಿಪ್ರಾಯ ದಂತೆ, ರಂಗಪರಿಕರಗಳು ಕ್ರಿಯೆಯನ್ನು ಉದ್ರೇಕಿಸಬಾರದು, ಕ್ರಿಯೆಗೆ ವಿರುದ್ಧ ವಾಗಿದ್ದು ವಾಗ್ವಾದವನ್ನು ಪ್ರಾರಂಭಿಸುವಂತಿರಬಹುದು, ಕ್ರಿಯೆಯನ್ನು ವ್ಯಾಖ್ಯಾನಿಸ ಬಹುದು ಅಥವಾ ಒಂದು ನಿಲುವನ್ನು ವ್ಯಕ್ತಪಡಿಸಬಹುದು. ಇದನ್ನು ಸಾಧ್ಯಗೊಳಿ ಸಲು ಮೇಳ ಸದಾ ರಂಗದ ಮೇಲಿರಬೇಕು, ಸಂಗೀತ ತೀರಾ ಮಧುರವಾಗಿರಬಾರದು, ಬೆಳಕಿನ ಮೂಲ ಪ್ರೇಕ್ಷಕರಿಗೆ ಕಾಣುವ ಸ್ಥಳಗಳಲ್ಲಿ ಇರಿಸಬೇಕು, ದೃಶ್ಯ-ಹಾಡುಗಳ ಶೀರ್ಷಿಕೆಗಳನ್ನು ಪರದೆಯ ಮೇಲೆ ಕಾಣಿಸಬೇಕು, ರಂಗಸಜ್ಜಿಕೆ ತೀರಾ ವಿವರವಾಗಿರ ಬಾರದು-ಹೀಗೆ ಇವನ ಸೂಚನೆಗಳು ಬೆಳೆದಿವೆ. ಇವು ಕೇವಲ ರಂಗತಂತ್ರಗಳು ಮಾತ್ರವಷ್ಟೇ ಅಲ್ಲ. ಪ್ರೇಕ್ಷಕರನ್ನು ಭ್ರಮೆಯಿಂದ ವಿಮೋಚನೆಗೊಳಿಸಿ ತಮ್ಮ ಜೀವನದ ಪಾಡನ್ನು ಸಮಾಜದ ಚೌಕಟ್ಟಿನೊಳಗೆ ರೂಪಿಸಿಕೊಳ್ಳಲು ಪ್ರೇರೇಪಿಸುವುದು ಈ ತಂತ್ರಗಳ ಹಿಂದಿನ ಸೈದ್ಧಾಂತಿಕ ನಿಲುವಾಗಿದೆ.

ಬದುಕಿದ್ದ ಐವತ್ತೆಂಟೇ ವರ್ಷಗಳಲ್ಲಿ (1898—1956) ತನ್ನ ಸೂಕ್ಷ್ಮ ನಾಟಕ ಕೃತಿಗಳು, ಪ್ರಖರ ವೈಚಾರಿಕತೆ ಮತ್ತು ಸ್ವೋಪಜ್ಞ ರಂಗಚಿಂತನೆಗಳಿಂದ ನಾಟಕ ಸಾಹಿತ್ಯ ಮತ್ತು ರಂಗಭೂಮಿಗಳಲ್ಲಿ ಮೂಲಭೂತ ಬದಲಾವಣೆಗಳನ್ನು ಮಾಡಿದವನು ಬ್ರೆಕ್ಟ್. ಜರ್ಮನಿಯಲ್ಲಿ ಹುಟ್ಟಿ, ಯೂರೋಪಿನ ಇತರ ದೇಶಗಳಲ್ಲಿ ಮತ್ತು ಅಮೆರಿಕಾದಲ್ಲಿ ಬದುಕಿ, ಮತ್ತೆ ತಾಯ್ನಾಡಿಗೆ ಹಿಂತಿರುಗಿ, ಕೊನೆಯವರೆಗೆ ಪೂರ್ವ ಜರ್ಮನಿಯಲ್ಲಿ ಬಾಳಿದ ಇವನ ನಾಟಕಗಳು ಮತ್ತು ಸಿದ್ಧಾಂತ ಗ್ರಂಥಗಳು ನಮಗೆ ಇಂದಿನ ಭಾರತದ ಸಂದರ್ಭದಲ್ಲಿ ತುಂಬಾ ಪ್ರಸ್ತುತವೆಂದು ಖಚಿತವಾಗಿ ಹೇಳ ಬಹುದು. ಶ್ರೀಮಂತ ಜಾನಪದ ರಂಗಪರಂಪರೆಯನ್ನು ಹೊಂದಿರುವ ನಾವು ಬ್ರೆಕ್ಟ್‌ನ ಎಪಿಕ್ ರಂಗಭೂಮಿಯಿಂದ ಏನನ್ನು, ಎಷ್ಟನ್ನು ಕಲಿಯಬಹುದು ಎಂಬು ದನ್ನು ಪ್ರತ್ಯೇಕವಾಗಿ ವಿವೇಚಿಸಬೇಕು.

# ಕೊಡಗು ಭಾಷೆ ಮತ್ತು ಸಾಹಿತ್ಯ

ಮೀನಾ ಕೊಡ್ಲೆಕೆರೆ

ಪೂರ್ವದಲ್ಲಿ ಬ್ರಹ್ಮಕ್ಷೇತ್ರ, ಮತ್ಸ್ಯದೇಶ, ಕ್ರೋಢದೇಶ ಎಂದೆಲ್ಲ ಕರೆಯಲ್ಪಡುತ್ತಿದ್ದ ಕರ್ನಾಟಕ ರಾಜ್ಯದ ಕೊಡಗು ಜಿಲ್ಲೆಯ ಜನರ ಆಡುಭಾಷೆ 'ಕೊಡಗು', ಕೊಡಗು ಭಾಷೆಯು ಬೆಳೆದುಬಂದ ಇತಿಹಾಸ–ಪರಂಪರೆ–ಸಾಂಸ್ಕೃತಿಕ ಬೆಡಗು ರೋಚಕವಾದದ್ದು. ಹೆಚ್ಚಾಗಿ ದಕ್ಷಿಣ ಭಾರತದ ಎಲ್ಲಾ ಭಾಷೆಗಳ ಸಮ್ಮಿಶ್ರತೆಯ 'ಜಾಜಾ' ಭಾಷೆ ಕೊಡಗು ಎಂಬ ಗ್ರಹಿಕೆ ಬಂದರೂ – ಈ ಭಾಷೆಯು ತನ್ನದೇ ಆದ ಬೆರಗು ಮಹತ್ವವಾದುದು.

ಕೊಡಗಿನ ಬೆಳವಣಿಗೆಯಲ್ಲಿ ಎಷ್ಟೆಲ್ಲ ಅಂಶಗಳನ್ನು-ಸಿದ್ಧಾಂತಗಳನ್ನು ಸಾಮಾಜಿಕವಾಗಿ–ಪ್ರಾಕೃತಿಕವಾಗಿ–ಆರ್ಥಿಕವಾಗಿ ನಾವು ಕಾಣಬಹುದಾದರೂ - ಕೊಡವರ ನಾಡಿನಲ್ಲಿಯೇ ಕೊಡವರ ಭಾಷೆಗೆ ದೊರೆತ ಅನಾದರ ಮಾತ್ರ ವಿಷಾದನೀಯವಾದುದು. ನಾಡಿನ ಬೆಳವಣಿಗೆಯಲ್ಲಿ ಭಾಷೆಯ ಪಾತ್ರ ಮಹತ್ವದ್ದು. ದುರ್ದೈವದಿಂದಾಗಿ ಈ ಭಾಷೆಯ ಸಂಪತ್ತು ಕರಗತೊಡಗಿರುವುದು ಕಟುಸತ್ಯ.

ಬೆಡಗಿನ ಕೊಡಗು ವೈಸಿರಿಯ ಭೋಗಿಸಲು ಬಂದವರೆಲ್ಲ ಇಲ್ಲಿನ ಪ್ರಾಕೃತಿಕ ಸಂಪತ್ತನ್ನು ಸೂರೆಗೈದರೇ ವಿನಾ ನಾಡಿನ ಬೆಳವಣಿಗೆಗೆ ಯಾವ ಕಾಣಿಕೆಯನ್ನೂ ನೀಡಲಿಲ್ಲ. ಬ್ರಿಟಿಷರ ಆಡಳಿತದಲ್ಲಂತೂ ಇಲ್ಲಿ ಉಂಟಾದ ಪಾಶ್ಚಿಮಾತ್ಯ ಪ್ರಭಾವದಿಂದಾಗಿ ಮೂಲ ಭಾಷೆ ಸಂಪೂರ್ಣವಾಗಿ ಸೊರಗಿತೆಂದೇ ಹೇಳಬೇಕು. ನೆರೆ ನಾಡಾದ ಕೇರಳದಿಂದ ಅಪಾರ ಸಂಖ್ಯೆಯಲ್ಲಿ ಬಂದ ಕೇರಳದ ಜನರಿಂದಾಗಿ ಇಂದು - ಬಹುಶಃ ಕೊಡಗು ಜಿಲ್ಲೆ ಕೇರಳದ ಒಂದು ಜಿಲ್ಲೆಯೆಂದು ಅನಿಸಿದರೆ ಆಶ್ಚರ್ಯವಿಲ್ಲ.

ಮುಖ್ಯವಾಗಿ ಕೊಡಗಿನ ಮೂಲ ನಿವಾಸಿಗಳಾದ ಕೊಡವರೂ ತಮ್ಮ ಭಾಷೆಯ ಕುರಿತು ಅಭಿಮಾನ ಹೊಂದದಿರುವುದೇ ಈ ಭಾಷೆಯ ಸೊರಗುವಿಕೆಗೆ ಕಾರಣ. ಕನ್ನಡದ ಕುರಿತು - ಕನ್ನಡ ಸೊರಗುತ್ತಿದೆ ಎಂಬುದರ ಕುರಿತು ಕಹಳೆ ಊದುವ ಪ್ರಭಾವಿ ವಲಯ ಕೂಡ - ತನ್ನ ನಾಡಿನ ಅಂಗ ವೈಶಿಷ್ಟ್ಯವಾದ ಕೊಡಗು ಭಾಷೆಯ ಕುರಿತು ದನಿ ಎತ್ತದಿರುವುದು ಆಶ್ಚರ್ಯವೇ ಸರಿ. ನಾಡಿನ ಜನತೆಯ ಪ್ರತಿನಿಧಿ

ಗಳಿಂದಾದ ಅಂಗರಚನೆಯು ನಮ್ಮ ಕರ್ನಾಟಕ ಸರ್ಕಾರ ಕೂಡ ಕೊಡಗು ಭಾಷೆಯ ಸಂರಕ್ಷಣೆಯ ಕುರಿತು ಏನು ಮಾಡಿದೆ ಎಂದು ಕೇಳಿದರೆ ಉತ್ತರ ದೊರಕಿಸುವುದು ದುಸ್ತರವಾದೀತು.

ಕೊಡಗು ಕಿತ್ತಳೆಯ ನಾಡು–ಬೆಡಗಿಯರ ಬೀಡು–ಹುಲಿಯ ಹಾಲಿನ ಮೇವ ಮೇಯುವ ವೀರರು ಕೊಡವರು - ಕೊಡಗು ನಾಡಿನ ಸಿಹಿ ನೀರ ಸೆಲೆ ಕಾವೇರಿಯ ತವರು - ಕ್ರಿಡಾಪಟುಗಳ ದಂಡೇ ಹೊಂದಿದ ಜಿಲ್ಲೆ ಎಂಬೆಲ್ಲ ಅದೇ ಮಾತುಗಳನ್ನು ಆಡುತ್ತ ಕೊಡಗಿನ ಕುರಿತು ನಾವು ಉರು ಹೊಡೆದರೂ ಎಲ್ಲ ವಿಷಯಗಳಲ್ಲಿಯೂ ನಿರ್ಲಕ್ಷ್ಯಕ್ಕೊಳಗಾದ ಜಿಲ್ಲೆ ಕೊಡಗು ಎಂಬುದರಲ್ಲಿ ಅನುಮಾನವಿಲ್ಲ. ಕೊಡಗು ಭಾಷೆಯೆಂಬುದು ಇದೆ ಎಂಬುದು ಭಾರತದಲ್ಲಿ ಏಕೆ ಕರ್ನಾಟಕದಲ್ಲಿಯೇ ಎಲ್ಲರಿಗೂ ತಿಳಿದಿದೆಯೋ ಇಲ್ಲವೋ ಎಂಬುದು ಅನುಮಾನದ ವಿಷಯ.

ಈ ಭಾಷೆಯ ಪರಿಸ್ಥಿತಿಯು ಇಷ್ಟೊಂದು ಸೂಕ್ಷ್ಮವಾಗಿದ್ದರೂ ಕಳೆದ ಹತ್ತು ವರ್ಷದಲ್ಲಿ ಕೊಡವ ಬರಹಗಾರರ - ಸೃಜನಶೀಲರ ಪ್ರಯತ್ನದಿಂದಾಗಿ ಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಮಹತ್ವದ್ದಾದ ಆಂದೋಲನ ಮೈದಳೆಯಿತೆಂದೇ ಹೇಳಬೇಕು. ಕೊಡವರ ಮುಖವಾಣಿಯಾಗಿ ಮೈದಳೆದ ಕೊಡವ ಭಾಷೆಯ ಪತ್ರಿಕೆಯಾದ 'ಬ್ರಹ್ಮಗಿರಿ' ಈ ನಿಟ್ಟಿನಲ್ಲಿ ಅಭಿನಂದನೀಯ ಪಾತ್ರವಹಿಸಿತು. ಇದರ ಸಂಪಾದಕರಾದ ಶ್ರೀ ಉಳ್ಳಿಯಡ ಎಂ. ಪೂವಯ್ಯ ಪತ್ರಿಕೆಯ ಬೆಳವಣಿಗೆಯೊಂದಿಗೆ ಕೊಡವ ಭಾಷೆಯ ಸಾಹಿತ್ಯವನ್ನು ಪ್ರಕಟಿಸಲಿಕ್ಕೆ ಈ ಪತ್ರಿಕೆಯನ್ನು ವೇದಿಕೆಯನ್ನಾಗಿ ಬೆಳೆಸಿದ ರೀತಿ ಉಲ್ಲೇಖಾರ್ಹ.

## ಪಟ್ಟೋಳೆ ಪಳಮೆ

ಕೇವಲ ಹತ್ತು ವರ್ಷಗಳ ಹಿಂದೆಯಷ್ಟೇ ಕೊಡವ ಸಾಹಿತ್ಯದ ಬೆಳವಣಿಗೆಯ ಕಾರ್ಯ ಪ್ರಾರಂಭವಾಯಿತೆಂಬುದನ್ನು ಒಪ್ಪಿಕೊಳ್ಳಬಹುದಾದರೂ ಆ ಹಿಂದೆ ಕೊಡವ ಸಾಹಿತ್ಯದ ಬೆಳವಣಿಗೆಯ ಕುರಿತು ಪ್ರಯತ್ನವೇ ನಡೆದಿಲ್ಲವೆಂದಲ್ಲ. ಅನೇಕ ಬರಹಗಾರರು ತಮ್ಮ ಕಥೆ, ಕಾವ್ಯಗಳ ಮೂಲಕ ಕೊಡವ ಸಾಹಿತ್ಯಕ್ಕೆ ತಮ್ಮ ಸೇವೆ ಸಲ್ಲಿಸಿದ್ದಾರೆ. 1922ರಲ್ಲಿ ಶ್ರೀ ವಡಿಕೇರಿಯಂಡ ಚಿಣ್ಣಪ್ಪನವರು ಕೊಡವ ಭಾಷೆಯಲ್ಲಿ ಬರೆದ ಮೊದಲ ಪುಸ್ತಕ 'ಪಟ್ಟೋಳೆ ಪಳಮೆ' ಕೊಡವ ಸಾಹಿತ್ಯದ ಆದಿ ಗ್ರಂಥ ಎಂದರೆ ತಪ್ಪಾಗಲಾರದು. ಕೊಡವ ಭಾಷೆಯನ್ನು ಬಳಸಲು, ಆ ಮೂಲಕ ಅದನ್ನು ಬೆಳೆಸಲು ಪ್ರಯತ್ನಿಸಿದ, ಅನನ್ಯ ಪ್ರಯತ್ನದ ಪರಿಣಾಮವೇ 'ಪಟ್ಟೋಳೆ ಪಳಮೆ' ಕೃತಿ.

ಈ ಗ್ರಂಥದಲ್ಲಿ ಕೊಡವರ ಸಂಸ್ಕೃತಿಯ ಕುರಿತು ದೊಡ್ಡ ವಿವರಣೆಯೇ ಅಡಗಿದೆ. ಕೊಡವರು ಹಿಂದೂಗಳೇ ಆದರೂ ಇತರ ಹಿಂದೂ ಧರ್ಮೀಯರಿಗಿಂತ ವಿಭಿನ್ನವಾದ ಇವರ ಧಾರ್ಮಿಕ ಆಚರಣೆ–ಪದ್ಧತಿ–ಸಂಪ್ರದಾಯಗಳ ಭೌಗೋಳಿಕ ವಿವರಣೆಯ ಕುರಿತು ಸ್ವಾರಸ್ಯಪೂರ್ಣ ಅಂಶಗಳ ಬರಹ ಇದರಲ್ಲಿದೆ.

ಈ ಪುಸ್ತಕದ ಪೀಠಿಕೆಯುನ್ನೇ ಕಾವ್ಯದ ನಾಲ್ಕು ಸಾಲುಗಳ ಮೂಲಕ ಕರ್ತೃ ಸ್ವಾರಸ್ಯಕರವಾಗಿ ನಿವೇದಿಸಿದ್ದಾನೆ.

ಅರಿತವನೆ ನಿನಗೇತಕಿದು ?।
ಅರಿಯುಲಿಪ್ಪವಿಲ್ಲದವನೇ ನಿನಗೇತಕಿದಂ ?॥
ಅರಿಯಲಾರದವಗೇತಕಿದಂ ?
ಅರಿಯುಲಪೇಕ್ಷಿಸುವವನೆ ಸೀನಿದನು ನೋಡು ॥

ಅಂತೂ ಕೊಡವರ ಬಗೆಗೆ ತಿಳಿಯಲಪೇಕ್ಷಿಸುವ ಪ್ರತಿಯೊಬ್ಬನೂ ಆವಶ್ಯವಾಗಿ ಓದಲೇ ಬೇಕಾದ ಗ್ರಂಥ 'ಪಟೋಳೆ ಪಳಮೆಂ'. ಒಂದು ಜನಾಂಗದ ರೀತಿಗಳು - ಜೀವನ ಪದ್ಧತಿಯಂ - ಸಾಂಸ್ಕೃತಿಕ ನೋಟಗಳ ಶ್ರೀಮಂತ ವಿವರಣೆಯುನ್ನು ಹರಿಯುವ ನದಿಯಂತೆ ಸರಳವಾದ ಸೊಬಗಲ್ಲಿ ಈ ಕೃತಿ ಪರಿಚಯಿಸುತ್ತದೆ. ತನ್ನ ನೆಲದ ಕುರಿತಾದ-ಸಂಸ್ಕೃತಿಯು ಕುರಿತಾದ ತೀವ್ರ ಕಾಳಜಿಯುನ್ನು ಗ್ರಂಥಕರ್ತ ತೋರುತ್ತ ಮುಂದಿನ ಜನಾಂಗಕ್ಕೆ ತಮ್ಮ ಮೂಲವನ್ನು ಅರಿಯಲುಂ ಹಸ್ತಾಂತರಿಸಿದ ಬಹು ದೊಡ್ಡ ದಾಖಲೆ ಕೂಡ ಇವಾಗಿದೆ.

## ಕೊಡವ ಭಾಷೆಯುಲ್ಲಿ ಸಣ್ಣ ಕತೆಗಳು

ಈ ಮೊದಲೇ ಬರೆದಂತೆ ಕೊಡವರ ಮುಖವಾಣಿಯಾಗಿ ಬೆಳೆದ 'ಬ್ರಹ್ಮಗಿರಿ' ವಾರಪತ್ರಿಕೆ ಕೊಡವ ಭಾಷೆಯುಲ್ಲಿನ ಸಣ್ಣಕತೆಗಳ ಪ್ರಕಾರ ಬೆಳೆಯಲುಂ ಮಹತ್ವದ ಪಾತ್ರ ವಹಿಸಿತು. ಈ ಪತ್ರಿಕೆ ಹುಟ್ಟಿದ್ದೇ ಹನ್ನೊಂದು ವರ್ಷಗಳಷ್ಟು ಹಿಂದೆ. ಒಂದಂ ಭಾಷೆಯು ಸಾಹಿತ್ಯದ ಕುರಿತಂ ಅರಿವು ಬರಬಹುದಾದದ್ದು ಅದು ಪ್ರಕಟಿತ ರೂಪದಲ್ಲಿ ಓದುಗನನ್ನು ತಲುಪಿದಾಗ ಮಾತ್ರ. ಹಾಗಾಗಿ ಈ ಪತ್ರಿಕೆಯು ಹುಟ್ಟಿಗಿಂತ ಮುಂಚೆ ಯಾರಾದರೂ ಸಣ್ಣಕತೆಗಳನ್ನು ಬರೆದಿದ್ದರೂ - ಪ್ರಕಟಿತ ರೂಪದಲ್ಲಿ ಅದು ಕಂಡುಬಂದುದಿಲ್ಲ. ಈ ನಿಟ್ಟಿನಿಂದ 'ಬ್ರಹ್ಮಗಿರಿ'ಯು ಪ್ರಾರಂಭದಿಂದಲೇ ಕೊಡವ ಭಾಷೆಯು ಸಣ್ಣಕತೆಗಳೂ ಹುಟ್ಟಿಕೊಂಡವು ಎನ್ನುವ ಅಭಿಪ್ರಾಯುಕ್ಕೆ ಬರುವುದಂ ಸಹಜವಾಗಿದೆ.

ತನ್ನ ಪತ್ರಿಕೆಯು ಮೂಲಕ ಕೊಡವರಲ್ಲಿಯಂೂ ಕತೆಗಾರರಿದ್ದಾರೆ ಎಂಬ ಬೆಳಕನ್ನು ಚೆಲ್ಲಿದ 'ಬ್ರಹ್ಮಗಿರಿ'ಯಂ ಸಂಪಾದಕ ಶ್ರೀ ಯು. ಎಂ. ಪೂವಯ್ಯ ಅಭಿನಂದನಾರ್ಹರು. ಅವರು ಈ ಪತ್ರಿಕೆಯುಲ್ಲಿ ಸಾಹಿತ್ಯದ ಚರ್ಚೆ, ಕ್ವಿಜ್, ಲಲಿತ ಪ್ರಬಂಧ, ಕತೆ, ಕಾವ್ಯ ಕೊಡವರ ವಿಶೇಷ ಕಾರ್ಯಕ್ರಮಂಗಳ ವಿವರಣೆ–ರಾಜಕೀಯು–ಉದ್ಯೋಗ ವಾರ್ತೆ ಹೀಗೆ ಎಲ್ಲದಕ್ಕೂ ಸ್ಥಾನವಿದೆ. ದೇಶವಿದೇಶಗಳ ಕೊಡವ ಜನಾಂಗೀಯರ ಮನೆ ತಲುಪುವ ಕೊಡವ ಪತ್ರಿಕೆ ಇದೊಂದೇ.

ಈ ಪತ್ರಿಕೆಯಂತೆ - ಕೊಡವ ಭಾಷೆಯು 'ಜಮ್ಮನಂಗಡ' ಪತ್ರಿಕೆ ಕೂಡ ಕೊಡವ ಸಾಹಿತ್ಯದ ಬೆಳವಣಿಗೆಯು ಪರ್ವಕ್ಕೊಂದು ನೆಲೆಯಾಯಿತೆಂಬುದನ್ನು ಅಲ್ಲಗಳೆಯು

ಲಾಗದು. ಅನಿವಾರ್ಯ ಕಾರಣಗಳಿಂದಾಗಿ ಈ ಪತ್ರಿಕೆ ತನ್ನ ಕಾರ್ಯವನ್ನು ನಿಲ್ಲಿಸ ಬೇಕಾಗಿ ಬಂದುದು ಕೊಡವ ಸಾಹಿತ್ಯದ ಬೆಳವಣಿಗೆಯ ಅವಶ್ಯ ಸಂದರ್ಭದಲ್ಲಿ ದೊಡ್ಡ ಆಘಾತವೇ ಸರಿ. ಆದರೂ 'ಬ್ರಹ್ಮಗಿರಿ' ಪತ್ರಿಕೆ ತನ್ನ ಜವಾಬ್ದಾರಿಯನ್ನು ಗಮನಿಸಿ, ಭಾಷೆಯ ಉತ್ಥಾನಕ್ಕೆ ಕಟಿಬದ್ಧವಾಗಿರುವುದು ಸಂತಸದ ವಿಷಯವಾಗಿದೆ.

'ತೂಕ್ ಬೊಳ್‌ಚ' ಎಂಬ ಮೂರನೆಯ ಕೊಡವ ಪತ್ರಿಕೆಯೂ ಅಸ್ತಿತ್ವದಲ್ಲಿದೆ. 'ತೂಕ್ ಬೊಳ್‌ಚ' ಎಂದರೆ 'ತೂಗುದೀಪ'. ಎಂಥ ಸುಂದರವಾದ ಉದ್ದೇಶದೊಂದಿಗೆ ಪತ್ರಿಕೆ ಆರಂಭವಾಗಿರಬಹುದೆಂಬುದನ್ನು ನಾವು ಈ ಪತ್ರಿಕೆಯ ಹೆಸರಿಂದಲೇ ಗ್ರಹಿಸ ಬಹುದು. ಆದರೆ ಈ ಪತ್ರಿಕೆ ಕೊಡವರನ್ನು ಅಷ್ಟೊಂದು ತಟ್ಟದಿರುವುದು ಆಶ್ಚರ್ಯ. ಹೆಚ್ಚಿನ ಪ್ರಸಾರ ಇದಕ್ಕೆ ದೊರಕಿಲ್ಲ. ಧೈರ್ಯದಿಂದ ಪತ್ರಿಕೆ ತನ್ನ ವ್ಯಾಪ್ತಿಯನ್ನು ಹೆಚ್ಚುಗೊಳಿಸಿದರೆ ಭಾಷೆಯ ಬೆಳವಣಿಗೆಗೆ ಆಧಾರವಾದೀತು.

ಕಳೆದ ಹತ್ತು ವರ್ಷಗಳಲ್ಲಿ ಬಂದ ಕೆಲವು ಕೊಡವ ಕತೆ ಕವನಗಳ ಕನ್ನಡ ಅನು ವಾದವನ್ನು ಇಲ್ಲಿ ಒದಗಿಸಲಾಗಿದೆ. ಗುಣಮಟ್ಟದ ದೃಷ್ಟಿಯಿಂದ ಈ ಕತೆ-ಕವನ ಗಳನ್ನು ವಿಮರ್ಶಿಸುವ ಆತುರವನ್ನು ಕನ್ನಡ ಸಾರಸ್ವತ ಲೋಕ ತೋರಬಾರದು. ತನ್ನ ನಾಡಿನಲ್ಲಿಯೇ ಅನಾದರಕ್ಕೊಳಗಾದ ಕೊಡವ ಭಾಷೆಯ ಲೇಖಕ/ಲೇಖಕಿ ಕತೆ-ಕವನಗಳನ್ನು ಓದುಗನ ಹೃದಯಕ್ಕೆ ತಲುಪಿಸುವ ದೃಷ್ಟಿಯಿಂದ ಜನಪ್ರಿಯ ಕಥಾ ಮಾರ್ಗದಲ್ಲೇ ಸಾಗಿರುವುದನ್ನು ಅವಶ್ಯವಾಗಿ ಗಮನಿಸಬೇಕು,

ತನ್ನ ಭಾಷೆಯ ಓದುಗರ ಪ್ರಮಾಣವನ್ನು ಬೆಳೆಸಿಕೊಂಡ ಆತ್ಮಸ್ಥೈರ್ಯ ಒಮ್ಮೆ ಈ ಬರಹಗಾರ/ಬರಹಗಾರ್ತಿಯರಲ್ಲಿ ಬಂದುಬಿಟ್ಟರೆ – ಕಥೆಯ ಗುಣಮಟ್ಟ ವನ್ನು ಎತ್ತರಿಸುವ ನಿಟ್ಟಿನಲ್ಲಿ ಇವರು ನಡೆದಾರು ಎಂಬುದನ್ನು ನಾವು ಊಹಿಸ ಬಹುದು. ಆದುದರಿಂದ ಕೊಡವೇತರ ಓದುಗ ಸಹನೆಯಿಂದ ಕೊಡವ ಕತೆ-ಕವನ ಗಳನ್ನು ಓದಿದರೆ - ನಮ್ಮ ಕನ್ನಡ ನೆಲದ ಅಂಗವಾದ ಕೊಡವ ಭಾಷೆಯ ಭಂಡಾರ ಕೂಡ ಬೆಳೆದೀತು. 'ಬೆಳೆದೀತು' ಏನು ಬೆಳೆದೇ ಬೆಳೆಯುವುದು ಎಂಬ ಆತ್ಮವಿಶ್ವಾಸ ಈ ಲೇಖಕಿಯದು.

ಕತೆ-ಕವನಗಳ ಕುರಿತು ಈ ಎಲ್ಲ ಅಭಿಪ್ರಾಯಗಳನ್ನು ನೀಡುತ್ತ – "ಸಹನೆ ಯಿರಲಿ ಓದುಗರೆ" ಎಂಬ ವಿನಂತಿಯನ್ನು ಮಾಡುತ್ತಿರುವೆನಾದರೂ 'ಪಟ್ಟೋಳೆ ಪಳಮೆ'ಯಂಥ ಕೊಡವ ಪುಸ್ತಕದ ಕುರಿತು ಬರೆಯುವಾಗ ಇತರ ಭಾಷೆಯ ಪುಸ್ತಕಗಳ ಮಟ್ಟಕ್ಕಿಂತ ಎಷ್ಟಕ್ಕೂ ಕಡಿಮೆಯಿರದ ಪುಸ್ತಕ ಇದು ಎಂಬ ಅಭಿಮಾನ ಕೂಡ ಎದೆ ತುಂಬುತ್ತಿದೆ.

'ಆರ್ ನಾಡ್‌ಕ್ ನೂರ್ ಪಾಜೆ' (ಆರು ನಾಡಿಗೆ ನೂರು ಭಾಷೆ) ಎನ್ನುತ್ತಾ ಕೊಡವ ಸಂಪ್ರದಾಯದ ಉಳಿವಿನ ಪ್ರಯತ್ನವೆಂದು ಬರೆದ 'ಪಟ್ಟೋಳೆ ಪಳಮೆ' ಯಲ್ಲಿ ಕೊಡಗಿನ ಇತಿಹಾಸದಲ್ಲೂ ಬಂದು ಹೋದ ರಾಜರ ಕುರಿತು - ಅವರ ಆಡಳಿತ ಕ್ರಮಗಳ ಕುರಿತು - ಕೊಡವ ಪುರಾಣ ಕಥೆಗಳ ಕುರಿತು - ನಾಡ ಗಾದೆ ಮಾತುಗಳು -

ಜನಪದ ಸಾಹಿತ್ಯದ ಕುರಿತು ಅನೇಕ ವಿವರಣೆ ಇದ್ದು, ಇದು ಕೊಡಗಿನ ಕಿತ್ತಳೆಯಂತೆ ಸಿಹಿಯನ್ನೇ ಒಸರುತ್ತದೆ.

ಇತ್ತೀಚೆಗೆ ಕೊಡವ ಭಾಷೆಯ ಉಳಿವಿಗಾಗಿ ಶ್ರಮಿಸುತ್ತಿರುವವರಲ್ಲಿ ಶ್ರೀ ಐ. ಎಮ್. ಮುತ್ತಣ್ಣನವರ ಹೆಸರು ದೊಡ್ಡದು. ದೂರದ ಕೆನಡಾದಲ್ಲಿದ್ದರೂ ಕನ್ನಡದ ಅಂಗವಾಗಿ ಕೊಡವ ನುಡಿಯ ಚೌಕಟ್ಟಿಗೆ ಹೊಸ ಮೆರುಗನ್ನೇ ನೀಡಿರುವ ಇವರು ಅರವತ್ತಕ್ಕಿಂತ ಹೆಚ್ಚು ಪುಸ್ತಕಗಳನ್ನು ಹೊರತಂದಿದ್ದಾರೆ. ಇವುಗಳಲ್ಲಿ ಉನ್ನತ ಮಟ್ಟದ ಕನ್ನಡ ಹಾಗೂ ಆಂಗ್ಲ ಗ್ರಂಥಗಳೂ ತುಂಬಿಕೊಂಡಿವೆ.

ಕೊಡವ ಭಾಷೆಯಲ್ಲಿ ಇವರು ಪ್ರಕಟಿಸಿದ 'ಅಭಿಜ್ಞಾನ ಶಾಕುಂತಲ', ಷೇಕ್ಸ್ ಪಿಯರ್‌ನ Merchant of Vanice (ಕೊಡಗು ರೂಪಾಂತರದ ಹೆಸರು - 'ಕೊಡಗ್‌ರ ಕೋಮಟಿ') ಸಮರ್ಥ ಅನುವಾದ ಕೃತಿಗಳು. ಕೊಡವ – ಕನ್ನಡ ನಿಘಂಟಿನ ಸಂಪಾದಕರೂ ಕೂಡ ಇವರಾಗಿದ್ದಾರೆ. ಕೊಡವ ಜಾನಪದ ಗೀತೆಗಳನ್ನು 'Kodavas and their Gala Lela' ಎಂಬ ಹೆಸರಿಂದ ಇಂಗ್ಲಿಷಿಗೆ ಅನುವಾದಿಸಿದ್ದಾರೆ.

190೪ರಲ್ಲಿ ಹರಿದಾಸ ಅಪ್ಪಚ್ಚು ಕವಿ ಬರೆದ 'ಸುಬ್ರಹ್ಮಣ್ಯ' ನಾಟಕ ಕೂಡ ಒಂದು ಅನನ್ಯ ಕೃತಿಯಾಗಿದೆ. 1919ರಲ್ಲಿ 'ಕಾವೇರಿ' ಎಂಬ ನಾಟಕ ಕೂಡ ಕೊಡಗಿನಲ್ಲಿ ಇವರು ಬರೆದಿದ್ದರು. ಆದರೆ ಹರಿದಾಸ ಅಪ್ಪಚ್ಚು ಕವಿಯಂಥವರೂ ಎಲೆ ಮರೆ ಕಾಯಿಯಾಗಿಯೇ ಉಳಿದದ್ದು ಆಶ್ಚರ್ಯದ ಸಂಗತಿ.

ಮತ್ತೆ ಮತ್ತೆ ಅದೇ ಮಾತು – ಕಳಕಳಿ – ಸರಕಾರದ ಸಹಕಾರ ಬೇಕು – ನಮ್ಮ ಸುತ್ತಮುತ್ತಲ ಚಿತ್ತಾರಗಳ ಕುರಿತು ಚಿತ್ತ ಹರಿಸಬೇಕು ಎಂಬ ಮಾತಿನ ಮಂತ್ರಿಸೆಳೆ ನಾನು ಕಟ್ಟಲೆಣಿಸದೆ–ಎಲ್ಲದರ ನಿರ್ಧಾರವನ್ನು ಕಾಲಕ್ಕೇ ಬಿಟ್ಟುಕೊಡುತ್ತ- ಕೊಡವ ಸಾಹಿತ್ಯದ ವಿಷಯದಲ್ಲಿ ಹೆಚ್ಚಿನ ಅಂಶಗಳು ಜನತೆಗೆ ತಿಳಿಯುವಂತಾಗಲಿ – ಭಾಷೆ ಬೆಳೆಯಲಿ ಎಂಬ ಆಶಾಭಾವಕ್ಕೆ ಬದ್ಧಳಾಗುತ್ತೇನೆ.

# ನ್ಯಾಯ

(ಕೊಡವ ಭಾಷೆಯಲ್ಲಿ ಪ್ರಕಟಗೊಂಡ ಮೊದಲ ಸಣ್ಣಕತೆ)

---

ಮೂಲ ಕೊಡವ : ಸವ್ಯಸಾಚಿ
ಕನ್ನಡಕ್ಕೆ : ಮೀನಾ ಕೊಡ್ಲೆಕೆರೆ

[ಅಪ್ಪ ಮಾಡಿಕೊಟ್ಟ ಆಸ್ತಿಯ ಪಾಲು – ನಾಯಿಯ ಬಾಲ ಎರಡೂ ಡೊಂಕೇ ಆಗಿಹೋಯ್ತು. ಆದರಲ್ಲೂ ಮಾವಿನಮರ, ಕರೆಯುವ ಹಸು, ಹೊದೆಯುವ ಕಂಬಳಿಯ ಪಾಲಂತೂ ಬಲು ವಿಚಿತ್ರವಾಗಿದೆ ಎಂಬುದು ಊರಿನ ಜನರ ಅಭಿಪ್ರಾಯ. ಈ ಹಿನ್ನೆಲೆಯಲ್ಲಿ ಕತೆಯ ಪ್ರಾರಂಭ.]

ಬಿದ್ದಪ್ಪ ಹಾಗೂ ಅಪ್ಪಚ್ಚು ಕೊಡಗಿನ ಒಬ್ಬ ಸಾಮಾನ್ಯ ರೈತನ ಮಕ್ಕಳು. ರೈತ ಮುತ್ತಪ್ಪ ತನ್ನ ಈ ಇಬ್ಬರೂ ಮಕ್ಕಳು ದೊಡ್ಡವರಾದ ತಕ್ಷಣ, ತನಗೂ ವಯಸ್ಸಾದುದನ್ನು ಗಮನಿಸಿ – ಈ ಪೋರರು ಹೇಗೆ ಬೇಕಾದರೂ ನಿಭಾಯಿಸಿಕೊಳ್ಳಲಿ ಎಂದಂದುಕೊಂಡು, ತನ್ನ ಹೆಸರಲ್ಲಿದ್ದ ಭೂಮಿಯ ತುಂಡನ್ನು ಸಮಭಾವ ಮಾಡಿ ಇಬ್ಬರಿಗೂ ಹಂಚಿದ.

ಆಸ್ತಿಯಲ್ಲಿ ಪಾಲಾದರೂ ಒಂದು ವಿಶಿಷ್ಟ ಜಾತಿಯ ಮಾವಿನ ಮರ, ಕರೆದಷ್ಟೂ ಬತ್ತದ ಹಾಲಿರುವ ಒಂದು ಹಸು, ಹಳೆಯದಾದರೂ ಹರಿಯದೇ ಘಟ್ಟಿಯಾಗಿದ್ದ ಒಂದು ಕಂಬಳಿ ಮಾತ್ರ ಮಕ್ಕಳಿಗೆ ಪಾಲಾಗಿರಲಿಲ್ಲ. ಇವನ್ನು ಸಮನಾಗಿ ಪಾಲು ಮಾಡುವುದೂ ತಂದೆಗೆ ಕಷ್ಟದ ವಿಷಯವೇ ಆಗಿತ್ತು. ಸಂಗಡ ಕಿರಿ ಮಗನ ಮೇಲೆ ತಂದೆಯದು ಹೆಚ್ಚಿನ ಪ್ರೀತಿ ಕೂಡ.

ತನ್ನ ತುಂಟತನ, ಹಠಮಾರಿತನದಿಂದಾಗಿಯೂ ತಂದೆಗೆ ಪ್ರಿಯನಾದವನು ಕಿರಿಯ ಮಗನೇ. ತಂದೆಗೆ ಆತ ಬುದ್ಧಿವಂತನೇ ವೀರನೇ ಆಗಿದ್ದ. ಹಿರಿಯನೆಂದರೆ ಗೌರವ ತೋರುವ, ಗಂಭೀರ ಸ್ವಭಾವದ ಹಿರಿಯ ಮಗ ತಂದೆಯ ದೃಷ್ಟಿಯಲ್ಲಿ ಹೆಡ್ಡ ಹಾಗೂ ಉಪಯೋಗಕ್ಕಿಲ್ಲದವ ಎಂದೇ ಆಗಿತ್ತು. ಏನನ್ನೇ ತಾನು ಮಾಡಿದರೂ ಹಿರಿಯ ಮಗ ತೆಪ್ಪಗಿರುತ್ತಾನೆ ಎಂದು ತಂದೆ ಮಾವಿನಮರ, ಹಸು ಹಾಗೂ ಕಂಬಳಿಯ ವಿಷಯದಲ್ಲಿ ಒಂದು ನಿರ್ಧಾರಕ್ಕೆ ಬಂದ.

ಆ ನಿರ್ಧಾರದಂತೆ, ತಂದೆ ಸತ್ತ ಮರುದಿನದಿಂದ ಮಾವಿನಮರದ ಮೇಲ್ಭಾಗವು ತಮ್ಮನಿಗೆ ಸೇರತಕ್ಕದ್ದೆಂದೂ - ಕೆಳಭಾಗ ಅಣ್ಣನಿಗೆಂತಲೂ - ಅಣ್ಣ ಸರಿಯಾಗಿ ಮರದ ಪೋಷಣೆ ನಡೆಸಬೇಕೆಂತಲೂ, ಕಂಬಳಿಯನ್ನು ರಾತ್ರಿಯ ಸಮಯ ತಮ್ಮನೇ ಉಪಯೋಗಿಸುವುದೆಂದೂ - ಹಗಲಲ್ಲಿ ಅಣ್ಣನೇ ಉಪಯೋಗಿಸುವುದೆಂದೂ - ಕರೆಯುವ ಆಕಳಿನ ಮುಖ ಮತ್ತು ಗೋಣಿನ ಭಾಗ ಅಣ್ಣನಿಗೆಂತಲೂ, ಹೊಟ್ಟೆ ಹಾಗೂ ಕೆಚ್ಚಲು ತಮ್ಮನಿಗೆ ಸೇರಿದ್ದೆಂತಲೂ - ಹಸುವನ್ನು ಮೇಯಿಸಿ ಪೋಷಿಸುವ ಕೆಲಸ ಅಣ್ಣನದ್ದೆಂತಲೂ ನಿಯಮ ಏರ್ಪಟ್ಟಿತ್ತು. ಈ ನಿರ್ಣಯದ ಕೆಲವೇ ದಿನಗಳಲ್ಲಿ ತಂದೆ ಸತ್ತು ಹೋಗಿದ್ದ.

ತಂದೆಯು ಮಾಡಿದ ಏರ್ಪಾಡಿನಿಂದ ಕಿರಿಯ ಮಗ ಹಿಗ್ಗಿಹೋಗಿದ್ದ. ಊರವರೆಲ್ಲ ತಿಳಿಯುವಂತೆ ತಂದೆಯ ಮರಣಾನಂತರ ತಂದೆಯ ಕ್ರಿಯೆಗಳನ್ನು ತಾನೊಬ್ಬನೇ ಪೂರೈಸಿದ. ಇದರಿಂದಾಗಿ ತಂದೆಯ ಕುರಿತು ಹಿರಿಯ ಮಗನಿಗೆ ಗೌರವವೇ ಇಲ್ಲ ಎಂದು ಊರವರು ಭಾವಿಸುವಂತಾಯ್ತು. ಅಣ್ಣನಿಗೆ ಈ ಘಟನೆ ಬೇಸರ ತಂದರೂ ತಮ್ಮನ ದುಡುಕು ಸ್ವಭಾವದ ಅರಿವಿದ್ದ ಅವನು ತಮ್ಮನ ಕುರಿತು ಹೋಗಲಿ ಸಣ್ಣವನು - ನಾಳೆ ದಾರಿಗೆ ಬಂದಾನು ಎಂದುಕೊಂಡು ತೆಪ್ಪಗಿದ್ದ.

ಬೇಸಗೆ ಬಂದಂತೆ ಮಾವಿನಮರದ ತುಂಬಾ ತುಂಬಿಕೊಂಡ ಹಣ್ಣುಗಳು. ತಂದೆಯ ಮಾತಿನಂತೆ ಅಣ್ಣ ನಡೆಸಿದ ಮರದ ಆರೈಕೆಯಿಂದಾಗಿ ಫಸಲು ಇಮ್ಮಡಿಯಾಗಿತ್ತು. ಅಣ್ಣನೆಂದರೆ ಎಂದೂ ಗೌರವ ನೀಡದ ತಮ್ಮ ಮರದ ತುಂಬಾ ತುಂಬಿದ್ದ ಹಣ್ಣುಗಳನ್ನು ಕಿತ್ತು ಅಣ್ಣನಿಗೇನೂ ನೀಡದೆ - ಊರಿಗೆಲ್ಲ ಹಂಚಿ, ತನ್ನ ಹೆಂಡತಿ ಮನೆಗೂ ಕಳಿಸಿ – ಮಿಕ್ಕಿದ್ದ ಉಳಿದೆಲ್ಲವನ್ನೂ ಮಾರಿ ಕೈತುಂಬ ಹಣ ಮಾಡಿದ.

ಹಸುವಿನ ಹಾಲನ್ನೂ ತಮ್ಮ ಹೀಗೇ ಬಳಸಿದ, ಹಣ ಮಾಡಿದ. ಕಂಬಳಿ ಕೂಡ ರಾತ್ರಿ ತಮ್ಮನ ಉಪಯೋಗಕ್ಕಾಗಿ – ಹಗಲು ಅಣ್ಣ ಅದನ್ನು ಸ್ವಚ್ಛ ಮಾಡಿ ತೊಳೆದಿಡುವುದು ಮಾತ್ರ ಆಗಿತ್ತು. ಇದರಿಂದ ಅಣ್ಣನಿಗೆ ಬೇಸರವೆನಿಸಿದ್ದರೂ – ತಂದೆಯ ಮಾತಿಗೆ ಗೌರವ ತೋರಿ ಎಲ್ಲವನ್ನೂ ಸಹಿಸಿದ್ದ.

ಮರುವರ್ಷವೂ ಹೀಗೆ ಆಯ್ತು. ಮರದ ಫಸಲಿಂದ ತಮ್ಮನ ಅದೃಷ್ಟ ಖುಲಾಯಿಸಿತ್ತು. ಖುಷಿಯಿಂದ ತಮ್ಮನಿಗೆ ಕೇಕೆ. ಆದರೆ ಊರಿನ ಒಬ್ಬ ಹಿರಿ ವ್ಯಕ್ತಿಗೆ ಇದು ಸರಿ ಎನಿಸಲಿಲ್ಲ. ಅಣ್ಣನಿಗಾದ ಅನ್ಯಾಯದ ಕುರಿತು ಖೇದವೆನಿಸಿತ್ತು. ಹೇಗಾದರೂ ಮಾಡಿ ಅಣ್ಣನಿಗೂ ಲಾಭದ ಪಾಲನ್ನು ಕೊಡಿಸಬೇಕೆಂದು ಯೋಚನೆ ಮಾಡಿ ಅಣ್ಣನಿಗೆ ತನ್ನ ಬಳಿ ಬರಲು ಕರೆ ಕಳಿಸಿದ. ಗುಟ್ಟಾಗಿ ತನ್ನ ಅಭಿಪ್ರಾಯವನ್ನು – ತಮ್ಮನನ್ನು ದಾರಿಗೆ ತರುವ ಉಪಾಯವನ್ನು ತಿಳಿಸಿದ. ಅನ್ಯೋನ್ಯವಾಗಿರಿ ಎಂದು ತನ್ನ ಆಶಯವನ್ನೂ ತಿಳಿಸಿದ.

ಅಂತೆಯೇ ಮಾರನೆಯ ದಿನ ಬೆಳಿಗ್ಗೆ ಎದ್ದವನೇ ಅಣ್ಣ ಫಲದಿಂದ ತುಂಬಿ ತುಳುಕಿದ್ದ ಮಾವಿನಮರದ ಹಿರಿ ಕಾಂಡವನ್ನು ಕಡಿಯಲು ಪ್ರಾರಂಭಿಸಿದಂತೆ ನಟಿಸಿದ. ಇದನ್ನು ಕಂಡ ತಮ್ಮನ ಹೆಂಡತಿ ಘಾಬರಿಗೊಂಡು - ಎಲ್ಲೋ ಹೊರಗೆ ಹೋಗಿದ್ದ ಗಂಡನಿಗೆ ಅಣ್ಣನ ಕೃತ್ಯದ ಕುರಿತು ವರದಿ ಒಪ್ಪಿಸಿದಳು. ಇದನ್ನು ಕೇಳಿದವನೇ ಓಡಿಬಂದ ತಮ್ಮ ಅಣ್ಣನ ಬಳಿ ಬಂದು ಮರ ಕಡಿಯುವ ಅವನ ಕೃತ್ಯಕ್ಕೆ ಆಕ್ಷೇಪಿಸಿದ. ಹೀನಮಾನ ಬಯ್ಯತೊಡಗಿದ.

ಇದನ್ನು ಕೇಳಿದ ಅಣ್ಣ "ಮುಚ್ಚೋ ಬಾಯಿ. ನೀನ್ಯಾರೊ ಇದನ್ನೆಲ್ಲ ತಡೆಯಲು? ನನ್ನ ಪಾಲಿನ ಭಾಗವನ್ನು ನಾನು ಕಡಿಯುತ್ತೇನೆ. ಮರದ ಮೇಲಿನ ಭಾಗಕ್ಕೇನು ನಾನು ಕೈ ಹಚ್ಚಿಲ್ಲ. ಅವೆಲ್ಲ ನಿನಗೆ ಸೇರಿದ್ದು. ನನ್ನ ಕೆಲಸಕ್ಕೆ ತಡೆ ಹಾಕಿದರೆ ಜಾಗ್ರತೆ, ನಿನ್ನ ಕೈಕಾಲನ್ನು ಕೂಡ ಕಡಿದುಬಿಡುವೆ ಹುಶಾರ್...." ಎಂದು ಪ್ರಳಯ ಭೈರವನಂತೆ ಗರ್ಜಿಸಿದಾಗ ಹಸುವಿನಂತೆ ಸಾಧುವಾಗಿದ್ದ ಅಣ್ಣನ ಹೊಸ ರೂಪ ಗಮನಿಸಿ ಹೆದರಿಕೊಂಡ ತಮ್ಮ.

"ನಾನು ಮಾಡಿದ್ದು ತಪ್ಪಾಯ್ತು. ಮಾವಿನ ಹಣ್ಣುಗಳನ್ನು ಇಬ್ಬರೂ ಹಂಚಿ ಕೊಳ್ಳೋಣ ಸಮನಾಗಿ" ಎಂದು ಸಂಧಾನ ಮಾಡಿಕೊಂಡ.

ಮರುವರ್ಷ ಹಸು ಕರು ಹಾಕಿದಾಗ ಹಿರಿಯ ವ್ಯಕ್ತಿಯ ಉಪದೇಶದ ಪ್ರಕಾರ ಅಣ್ಣ ಆಕಳ ಬಾಯನ್ನು ಕತ್ತದ ಬಲೆ ಟೋಪಿಯಿಂದ ಕಟ್ಟಿಬಿಟ್ಟ. ಇದರಿಂದ ಹಸು ವಿಗೆ ತಿನ್ನಲು ಸಾಧ್ಯವಾಗದಾಯ್ತು. ಆಹಾರವಿರದೆ ಹಸು ಸೊರಗಿತು. ಹಾಲು ಕರೆಯದಾಯ್ತು. ಇನ್ನೊಂದು ದಿನ ಕಳೆದರೆ ಅದು ಸಾಯಲೂಬಹುದಿತ್ತು.

ಇದರಿಂದ ಕುಪಿತನಾದ ತಮ್ಮ, ಅಣ್ಣನೊಡನೆ ಜಗಳಕ್ಕೆ ಬಂದಾಗ ಅಣ್ಣ "ಅಪ್ಪನ ಮಾತಿನ ಪ್ರಕಾರ ಹಸುವಿನ ಮುಂಭಾಗವೆಲ್ಲ ನನ್ನದೆ. ನನ್ನ ಇಷ್ಟದಂತೆ ಮಾಡುತ್ತೇನೆ. ನೀನ್ಯಾರು ಕೇಳುವವನು" ಎಂದು ದಬಾಯಿಸಿದ. ತನ್ನ ಆಟ ನಡೆಯಲಾರದೆಂದರಿತ ತಮ್ಮ ಹಾಲನ್ನೂ ಸಮಪಾಲು ಮಾಡಿಕೊಳ್ಳೋಣ ಎಂದು ಒಪ್ಪಂದಕ್ಕೆ ಬಂದ.

ಹೀಗೇ ಪರಿಸ್ಥಿತಿ ಇರಲು ಮಳೆಗಾಲ ಪ್ರಾರಂಭವಾದ ತಕ್ಷಣ ತಮ್ಮನಿಗೆ ಕಳವಳ ಜಾಸ್ತಿ ಆಯಿತು. ಮಾವಿನಹಣ್ಣು ಹಾಗೂ ಹಾಲಿನಂತೆ ಕಂಬಳಿಯೂ ಕೈಬಿಡಬಹುದೆ ಎಂದು ಆತಂಕಗೊಂಡಿದ್ದ. ಏನೇ ಆಗಲಿ ಹಾಗಾಗಬಿಡಬಾರದು ಎಂದು ಮನದೊಳಗೇ ಅವನಿಗೆ. ಆದರೆ ಅಣ್ಣ ಊರಿನ ಹಿರಿಯ ವ್ಯಕ್ತಿಯ ಉಪದೇಶದ ಪ್ರಕಾರ ಬೆಳಿಗ್ಗೆ ಎದ್ದಾಕ್ಷಣ ಕಂಬಳಿಯನ್ನು ಹೊದ್ದುಕೊಂಡು ಕೆಲಸಕ್ಕೆ ಹೊರಡುತ್ತಿದ್ದ. ಗದ್ದೆಯ ಕೆಲಸ, ಅದು ಇದು ಎಂದು ಮಣ್ಣಾದ ಕಂಬಳಿಯನ್ನು ಸಂಜೆ ಮನೆಗೆ ಬಂದ ತಕ್ಷಣ ತೊಳೆದು ಒಣ ಹಾಕುತ್ತಿದ್ದ. ಹೀಗೆ ಒದ್ದೆಯಾದ ಕಂಬಳಿ ರಾತ್ರಿ ತಮ್ಮನ ಉಪ ಯೋಗಕ್ಕೆ ಬರುತ್ತಿರಲಿಲ್ಲ. ರೊಚ್ಚಿಗೆದ್ದ ತಮ್ಮ ಅಣ್ಣನ ಜತೆ ಹಾರಾಡಿದ.

ಆದರೆ ಅಣ್ಣ ಮಾತ್ರ ವ್ಯವಧಾನ ಕಳೆದುಕೊಳ್ಳದೆ "ನೋಡಪ್ಪ ಈಗೇಕೆ ನೀನು ತಗಾದೆ ಎಬ್ಬಿಸುವುದು? ಅಪ್ಪ ಕಂಬಳಿಯ ಕುರಿತು ನಿರ್ಣಯಿಸಿರುವಾಗ ನೀನದಕ್ಕೆ ಒಪ್ಪಿಕೊಂಡಿರುವೆ. ಹಗಲು ನಾನದನ್ನು ಹೊದ್ದಾಗ ಆದ ಮಣ್ಣು–ಕೆಸರನ್ನು ತೊಳೆಯದೆ ನೀಡುವುದು ನನಗೆ ಸರಿ ಅನಿಸದು. ಅದೆಷ್ಟು ಬೇಗ ಒಣಗುತ್ತದೋ ಅಷ್ಟು ಬೇಗ ನೀನು ರಾತ್ರಿ ಅದನ್ನು ಉಪಯೋಗಿಸು" ಎಂದು ಶಾಂತವಾಗಿ ನುಡಿದ.

ಅಣ್ಣನ ಮಾತಿಗೆ ತಲೆಬಾಗಿದ ತಮ್ಮ. ಹೆಡ್ಡನೆಂದುಕೊಂಡಿದ್ದ ಅಣ್ಣ ಬುದ್ಧಿವಂತನಾದುದು ಆಶ್ಚರ್ಯವೆನಿಸಿತು ತಮ್ಮನಿಗೆ. ತನ್ನ ತಪ್ಪನ್ನೆಲ್ಲ ಒಪ್ಪಿಕೊಂಡು ಅಣ್ಣನ ಕ್ಷಮೆ ಕೇಳಿದ.

ಅಣ್ಣ ತಮ್ಮನನ್ನಪ್ಪಿಕೊಂಡು "ಊರ ಜನರೆದುರು ನಮ್ಮ ಸ್ಥಿತಿ ನಗೆಪಾಟಲಾಗಬಾರದೆಂದು ಊರಿನ ಹಿರಿಯ ವ್ಯಕ್ತಿಯ ಆದೇಶದಂತೆ ಹೀಗೆ ಮಾಡಬೇಕಾಯ್ತು. ನಿನ್ನನ್ನು ತಿದ್ದುವ ಉದ್ದೇಶವೇ ನನ್ನದಾಗಿತ್ತು. ಇನ್ನು ಮುಂದಾದರೂ ಹೊಂದಿಕೊಂಡು ಬಾಳೋಣ ನಾವು" ಎಂದು ಸಂತೈಸಿದ ತಮ್ಮನನ್ನು.

ಮುಂದೆ ಹೊಂದಿಕೊಂಡು ಆದರ್ಶ ಬಾಳನ್ನು ಅವರು ನಡೆಸಿದರು.

# ಸೋತವರಾರು ?

ಮೂಲ (ಕೊಡಗು) : ಬೊಟ್ಟೋಳಂಡ ಮಿಟ್ಟು
ಅನು : ವೀಣಾ ಕೊಡ್ಲೆಕೆರೆ

"ಇಷ್ಟು ದಿನ ಸುಮ್ಮನುಳಿದಾಯ್ತು. ಇನ್ನಾಗದು ನನ್ನಿಂದ. ನಾಳೆ ನಾನು ಮತ್ತು ಶಾಂತಿ ಮದುವೆಯಾಗಲೇಬೇಕು. ಈ ವಿಚಾರವನ್ನು ಕೂಡ ಅಮ್ಮನಿಗೆ ತಿಳಿಸಿಬಿಡಬೇಕು" ಎಂದುಕೊಂಡ ವೇಣು ಮನೆ ತಲುಪಿದ.

ಆದರೆ ಮನೆಗೆ ಬಂದಾಗ ತಳೆದ ನಿರ್ಧಾರ ಕಾರ್ಯರೂಪಕ್ಕೆ ಬರಲೇ ಇಲ್ಲ. ಮಂಚವೇರಿ ಮಲಗಿ ಬಿಟ್ಟ ಉದಾಸೀನನಾಗಿ. ತಾಯಿ ನಾಲ್ಕೈದು ಸಲ ಊಟಕ್ಕೆ ಕರೆದಾಗಲೂ ಬರಲಿಲ್ಲ. ಇದರಿಂದ ತಾಯಿ ನೊಂದುಕೊಂಡರು. ಬಹುಶಃ ಶಾಂತಿಯ ವಿಷಯವಾಗಿಯೇ ಇದು ಎಂದು ಅವರು ನಿಟ್ಟುಸಿರುಬಿಟ್ಟರು.

ವೇಣುವಿಗೆ ನಿದ್ದೆ ಬರಲಿಲ್ಲ.

"ಹೌದು ! ರಿಜಿಸ್ಟರ್ ಮದುವೆಯಾಗಿ ನೇರವಾಗಿ ಶಾಂತಿಯನ್ನು ಮನೆಗೇ ಕರೆ ತಂದು ಬಿಟ್ಟಾಗ ಅಮ್ಮನ ಮನಸ್ಸಿಗೆ ಆಘಾತವಾದರೆ...." ವೇಣುವಿಗೆ ದ್ವಂದ್ವ.

ಹಾಗೆಂದು ಅಮ್ಮನಿಗೆ ತಿಳಿಸದಿರಲು ಸಾಧ್ಯವೆ ?

ಏನೇ ಆಗಲಿ ತಿಳಿಸಿಬಿಡುವೆ ವಿಷಯವನ್ನು ಎಂದು ತಾಯಿಯ ಬಳಿ ಬಂದು "ಅಮ್ಮಾ" ಎಂದ.

ತಾಯಿ ಏನೋ ಅದು ಎಂಬಂತೆ ನೋಡಿದಳು.

ವೇಣು ಎಲ್ಲವನ್ನೂ ಶಾಂತವಾಗಿ ವಿವರಿಸಿದ. "ಶಾಂತಿಯನ್ನು ಮದುವೆಯಾಗ ಬಾರದೆಂಬ ನಿನ್ನ ವಿರೋಧದ ಕಾರಣವನ್ನೇಕೆ ತಿಳಿಸುತ್ತಿಲ್ಲ ನೀನು" ಎಂದು ವಿನಯ ದಿಂದ ಕೇಳಿದ.

ಎಲ್ಲದಕ್ಕೂ ತಾಯಿಯ ಉತ್ತರ ಕೇವಲ ನಿಟ್ಟುಸಿರಾಗಿತ್ತು.

ಇನ್ನು ಮಾತನಾಡಿ ಪ್ರಯೋಜನವಿಲ್ಲವೆಂದು ಪುನಃ ತೆಪ್ಪಗಾದ. ತಾಯಿ ನೊಂದುಕೊಳ್ಳುವುದು ಅವನಿಗೆ ಸುತರಾಂ ಇಷ್ಟವಿರಲಿಲ್ಲ.

*　*　*

ಪೂವಯ್ಯ ಮತ್ತು ಆತನ ಹೆಂಡತಿ ಪೂವಮ್ಮ ಅನ್ಯೋನ್ಯ ದಂಪತಿಗಳು. ಪರಸ್ಪರರನ್ನು ಅರಿತು ಒಲುಮೆಯಿಂದ ನಡೆಸಿದ ಬದುಕು. ಪೂವಯ್ಯ ಹೆಂಡತಿಯನ್ನು ಪೂವಿ ಎಂದೇ ಕರೆಯುವುದು.

ಅವರ ನೆರೆಯಲ್ಲಿ ಸೋಮಯ್ಯನ ವಾಸ. ಆತ ವಿಷಯಲಂಪಟ. ದುರ್ವ್ಯಸನಿ. ಸುಂದರಿಯಾದ ಹೆಂಡತಿಯಿದ್ದರೂ ಇತರ ಹೆಂಗಸರನ್ನು ಮೋಹಿಸುವುದು ಅವನ ಚಟ. ಅವನ ದುರಾಚಾರದಿಂದ ಎಷ್ಟೆಲ್ಲ ಕುಟುಂಬಗಳು ಹಾಳಾಗಿದ್ದವು. ಆದರೆ ನೆರೆಮನೆಯ ಪೂವಿಯನ್ನು ಮಾತ್ರ ಕೆಣಕಲು ಅವನಿಂದ ಸಾಧ್ಯವಾಗಿರಲಿಲ್ಲ. ಒಮ್ಮೆ ಅವಕ್ಕೂ ಒಂದು ಸಂದರ್ಭ ಕೂಡಿಬಂತು.

ಗದ್ದೆಯಲ್ಲಿ ಪೈರು ಕೊಯ್ಲಿಗೆ ಬಂದ ಸಮಯ. ಕಾಡು ಹಂದಿಯ ಕಾಟ ತಡೆಯಲಾಗದೆ ಪೂವಯ್ಯ ಕೋವಿಯನ್ನು ತೆಗೆದುಕೊಂಡು ಗದ್ದೆಗೆ ರಾತ್ರಿಯ ಕಾವಲಿಗೆ ಹೊರಟ.

ಇದನ್ನು ತಿಳಿದ ಸೋಮಯ್ಯ, ಪೂವಯ್ಯ ಗದ್ದೆಗೆ ಹೊರಟ ಹತ್ತು ನಿಮಿಷಗಳಲ್ಲಿ ಪೂವಯ್ಯನ ಮನೆಗೆ ಬಂದು ಬಾಗಿಲು ತಟ್ಟಿದ.

ಬಾಗಿಲು ಬಡಿದ ಶಬ್ದ ಕೇಳಿ ಬಾಗಿಲು ತೆರೆದಳು ಪೂವಿ.

ಸೋಮಯ್ಯ ನಸು ನಗುತ್ತ ನಿಂತಿರುವುದನ್ನು ಪೂವಿ ಗಮನಿಸಿದಳು. ನೇರವಾಗಿ ಅವನು ಒಳಗೇ ಬಂದು ಬಿಟ್ಟ.

"ಎಲ್ಲಿ.... ಪೂವಯ್ಯ...... ಕಾಣಿಸುತ್ತಿಲ್ಲವಲ್ಲ" ಎಂದು ತಾನಾಗಿಯೇ ಮಾತು ಆರಂಭಿಸಿದ.

"ಅವರು ಇಲ್ಲ. ಗದ್ದೆಗೆ ಹೋಗಿದ್ದಾರೆ. ಏನಾದರೂ ಹೇಳುವುದಿದ್ದರೆ ಬೆಳಿಗ್ಗೆ ಬನ್ನಿ" ಎಂದಳು ಪೂವಿ.

"ಹೌದಾ ..." ಎಂದು ವಿಚಿತ್ರವಾಗಿ ನಗುತ್ತ, ಪೂವಿಯ ಮುಖವನ್ನೇ ನೋಡುತ್ತ ಸೋಮಯ್ಯ ಪಕ್ಕಿ ಬಲೆಯಲ್ಲಿ ಬಿತ್ತು ಎಂದು ಮನಸ್ಸಿನಲ್ಲಿಯೇ ಅಂದುಕೊಂಡ.

ಒಳಗೆ ಮಗು ಅಳತೊಡಗಿತ್ತು.

ಅಳುವ ಶಬ್ದ ಕೇಳುತ್ತಲೇ "ಅದೇನೋ ಮಗುವಿಗೆ ಮೈ ಹುಷಾರಿಲ್ಲವಂತೆ ಹೌದೆ" ಎನ್ನುತ್ತ ಸೋಮಯ್ಯ ಒಳಕೋಣೆಗೇ ನುಗ್ಗಿಬಿಟ್ಟ. ಪೂವಿಗೆ ಏನು ಮಾಡಬೇಕೆಂಬುದೇ ತೋಚದಾಯ್ತು. ಇನ್ನೇನು ಸೋಮಯ್ಯ ಅವಳನ್ನು ಹಿಡಿಯಬೇಕೆಂದುಕೊಂಡಾಗ ಕೋವಿಯ ಗುಂಡುಗಳನ್ನು ಮರೆತುಹೋಗಿದ್ದ ಪೂವಯ್ಯ ಮನೆಗೆ ಹಿಂದಿರುಗಿದ.

"ಅಯ್ಯೋ ದೇವರೆ–ನನ್ನ ಮಾನ ಉಳಿಸಿದ ನಿನಗೆ ಸಾವಿರ ವಂದನೆಗಳು" ಎಂದುಕೊಳ್ಳುತ್ತಿರುವಂತೆಯೇ "ಥತ್ ಎಲ್ಲಾ ಕೆಟ್ಟಿತು" ಎಂದಂದುಕೊಂಡ ಸೋಮಯ್ಯ

ಓಡಿಹೋಗಬೇಕೆನ್ನುವಷ್ಟರಲ್ಲಿ ಪೂವಯ್ಯ ಮಿಂಚಿನಂತೆ ಎರಗಿ–ಕಪಾಟಿನಿಂದ ಗುಂಡು ಗಳನ್ನು ತೆಗೆದು ಕೋವಿಗೆ ತುಂಬಿ ಸೋಮಯ್ಯನ ಕತೆ ಮುಗಿಸಿದ್ದ.

ಆದರೆ ಪೂವಯ್ಯನಿಗೆ ಸಿಟ್ಟು ಇಳಿಯಲಿಲ್ಲ. ಅವನು ಯೋಚಿಸಿದ್ದೇ ಬೇರೆಯಾಗಿತ್ತು. ಸೋಮಯ್ಯನ ಸಂಗಡ ಪೂವಿಯ ಕಾಮಚೇಷ್ಟೆ ಎಂದಿನಿಂದಲೂ ಇದೆ ಎಂದೇ ಗ್ರಹಿಸಿದ. ಆವೇಶ ಅವನನ್ನು ಕುರುಡನನ್ನಾಗಿಸಿತ್ತು. ಸೋಮಯ್ಯನನ್ನು ಬಲಿ ತೆಗೆದ ಮರುಕ್ಷಣವೇ ಅದೇ ಕೋವಿಯಿಂದ ಪೂವಿಯನ್ನು ಕೊಲ್ಲುವುದು ಅವನ ನಿರ್ಧಾರವಾಗಿತ್ತು. ಪೂವಿಗೆ ದಿಕ್ಕೇ ತೋಚಲಿಲ್ಲ. ಏನನ್ನು ಹೇಳಲೂ ಇಲ್ಲದ ಅವಕಾಶ. ಗಂಡ ತನ್ನನ್ನು ಮುಗಿಸುವುದು ನಿಶ್ಚಿತ ಎಂದು ಅರಿತಳು.

ಅದೆಲ್ಲಿಂದ ಶಕ್ತಿ ಬಂತೊ ಅವಳಿಗೆ ? ಚಂಗನೆ ಮಗುವಿದ್ದ ಕೋಣೆಗೆ ಜಿಗಿದು ಜೋರಾಗಿ ಬಾಗಿಲು ಹಾಕಿಕೊಂಡಳು. ಕ್ಷಣವೂ ತಡಮಾಡದೇ ಒಳಬಾಗಿಲಿಂದ ಮಗು ವನ್ನು ಬಗಲಿಗಿಟ್ಟುಕೊಂಡು ಕತ್ತಲೆಯಲ್ಲಿಯೇ ಓಡಿದಳು. ತನ್ನ ಅಸಹಾಯಕತೆಗೆ ಸಂಕಟವೆನಿಸಿತು. ಅತ್ತಳು. ಅಳುತ್ತ ಅಳುತ್ತಲೇ ತವ್ಮುನ ಮನೆ ಸೇರಿದಳು.

*          *          *

"ಇದೇ ನೋಡಪ್ಪ ನಿನ್ನಪ್ಪ ಮತ್ತು ನಾನು ಬೇರೆ ಬೇರೆಯಾಗಿ ಹೋದ ಘಟನೆ. ಆ ದಿನದ ನಂತರ ನನ್ನ ಮುಖವನ್ನೇ ಅವರು ನೋಡಿಲ್ಲ. ನಾನು ಪತಿತಳು ಎಂಬುದೇ ಅವರ ಭಾವನೆ. ಇದಕ್ಕೆಲ್ಲ ಕಾರಣ ಆ ಸೋಮಯ್ಯ. ಆ ರಾಕ್ಷಸನ ಮಗಳೇ ನೀನು ಪ್ರೀತಿಸಿದ ಶಾಂತಿ" ಎಂದು ಅಳುತ್ತ ಪೂವಿ ಮಗನಿಗೆ ತನ್ನ ದುರಂತದ ಕತೆ ತಿಳಿಸಿದಳು.

ವೇಣು ಮೌನಿಯಾಗಿದ್ದ.

ಆದರೆ ಪೂವಿಗೆ ಮಗನ ಮೌನ ಕರುಳನ್ನು ಹಿಂಸಿಸಿತು. ಏನೇ ಆಗಲಿ ಮಗನ ಮದುವೆಗೆ ತಾನು ಅಡ್ಡ ಬರುವುದು ಬೇಡವೆಂದು ಶಾಂತಿಯನ್ನು ಮದುವೆಯಾಗಲು ತನ್ನ ಸಮ್ಮತಿ ನೀಡಿಬಿಟ್ಟಳು.

ವೇಣುವಿಗೆ ಇದು ಕನಸೋ ನನಸೋ ಎಂದೇ ತಿಳಿಯಲಿಲ್ಲ.

ಶಾಂತಿ ವೇಣುವಿನ ಮಡದಿಯಾಗಿ ಮನೆ ತುಂಬಿದಳು.

*          *          *

ವೇಣು ಮದುವೆಯಾದ ಹೊಸತರಲ್ಲಿಯೇ ತಂದೆ ಪೂವಯ್ಯನಿಗೊಂದು ಪತ್ರ ಬರೆದ. ಅದರ ಸಾರಾಂಶ ಇಷ್ಟೇ ಇತ್ತು.

"ಪ್ರೀತಿಯ ತಂದೆ,

ಇಷ್ಟೆಲ್ಲ ವರ್ಷಗಳ ನಂತರ ನಿನ್ನ ಕೋಪ ಆರಿರಬಹುದೆಂದು ತಿಳಿಯುತ್ತೇನೆ. ನಿನ್ನ ಅನುಮಾನದ ಪೊರೆಯನ್ನೊಮ್ಮೆ ಕಳಚಿ-ನಿನ್ನ ಮಡದಿ-ನನ್ನ ತಾಯಿಯನ್ನೊಮ್ಮೆ ನೋಡು. ರಾಕ್ಷಸನೊಬ್ಬ ಬಂದು ಅವಳ ಶೀಲವನ್ನು ಕೆಡಿಸುವ ಸಂದರ್ಭದಲ್ಲಿ ದೇವ ರಂತೆ ಬಂದ ನಿನ್ನ ಪಾದವನ್ನು ನಿರಂತರವಾಗಿ ಪೂಜಿಸಬೇಕೆಂದಿದ್ದ ಅವಳು ನಿನ್ನ

ರೌದ್ರಾವತಾರವನ್ನು ನೋಡಿ ರಾತ್ರೋ ರಾತ್ರಿ ಪುಟ್ಟ ಕಂದನೊಡನೆ ಓಡಬೇಕಾದ ಸ್ಥಿತಿಯನ್ನು ನೀನು ಇದೀಗ ಊಹಿಸಬಹುದಾದರೆ—ಅವನನ್ನು ಕಾಣಲು ಬರುವೆ ಎಂದು ನಾನು ನಂಬುತ್ತೇನೆ.

ಇಂತೀ ನಿನ್ನ ಮಗ
ವೇಣು

*  *  *

ಪತ್ರ ಪರಿಣಾಮವನ್ನು ಮಾಡಿತ್ತು. ಪೂವಯ್ಯನ ಮನಸ್ಸು ಶುಭ್ರಗೊಂಡಿತ್ತು. ಪೂವಿಯಿದ್ದಲ್ಲಿಗೆ ಓಡೋಡಿ ಬಂದಿದ್ದ. ವೇಣುವಿನಂಥ ಮಗನನ್ನು ಬೆಳೆಸಿ ನೀನು ಗೆದ್ದೆ ಎಂದು ಅವಳನ್ನು ಅಭಿನಂದಿಸಿದ. ತನ್ನ ಸೋಲಿಗಾಗಿ ಕ್ಷಮಿಸು ಎಂದು ಬೇಡಿದ.

ಪೂವಿ ವಸುಂಧರೆಯಂತೆ ಪೂವಯ್ಯನನ್ನು ಕ್ಷಮಿಸಿದ್ದಳು. ಸೋತು ಗೆದ್ದಿದ್ದಳು.

## ಬದುಕೊಂದು ಕವನ

ಮೂಲ (ಕೊಡಗು) : ಪುಟ್ಟ ಪೆಮ್ಮಯ್ಯ
ಅನು : ಮೀನಾ ಕೊಡ್ಲೆಕೆರೆ

ಬೆಳಗಾಯ್ತು.... ರವಿ ಮೂಡಂತ್ತಾನೆ
ಅರಿಯದೆ ಅಡಿಯಿಡುವ ವಿಧಿಯು
ಕ್ರೂರ ಕತ್ತಲಾಗಂತ್ತ
ಸೂರ್ಯನ ಕತ್ತು ಹಿಸುಕಂತ್ತಾನೆ.

ರಾತ್ರಿ ರಾಜನಿಗೆ ಬೆದರುವ ಭೂಮಿ
ನೆನೆಸುವುದು ಸೂರ್ಯನಾಗಮನ
ಹಗಲು ರಾತ್ರಿ ಪೂರ್ತಿ
ಆಸೆ ನಿರಾಸೆಯು ನಡುವೆ ನಮ್ಮ ಬದುಕು

ಎಲ್ಲೋ ಹುಟ್ಟಿ ಎಲ್ಲೋ ಬದುಕುವ ನಮಗೆ
ಮೂರೇ ದಿನಗಳ ಬದುಕು. ಮುಗಿಸುತ್ತ ಎಲ್ಲವನು
ಕಾಲನಾಲಯಂದ ಕ್ರೂರ ಪಾಶಕ್ಕೆ ಸಿಲುಕಿ
ನಾವು ಹೋಗುವೆವು.... ಇತಿಹಾಸದಲ್ಲಿ ಹೊಸಕಿ....

"ಫೆಂಟಾಸ್ಟಿಕ್...." ಎಂದು ಜೋರಾಗಿ ಕೈ ತಟ್ಟಿ ಹೇಳಿದ ಜಪ್ಪ. ವಾರಪತ್ರಿಕೆಯೊಂದರಲ್ಲಿ ಬಂದ ಅವನ ಮೆಚ್ಚಿನ ಲೇಖಕಿಯ ಕವನವದು.

ಅಪ್ಪ ಆಗ ಜೋರಾಗಿಯೇ ಕೇಳಿದರು. "ಏನೋ ಅದು ಫೆಂಟಾಸ್ಟಿಕ್". ಇಂಗ್ಲಿಷ್ ಪತ್ರಿಕೆಯೊಂದನ್ನು ತಿರುವ ಹಾಕತೊಡಗಿದ್ದರು ಅವರು.

ಕೊಡವ ಭಾಷೆ – ಕೊಡವ ಪೇಪರು – ಕೊಡವ ಮಾತು ಎಂದರೇ ಸಿಡುಕುವ ಅಪ್ಪನ ಪ್ರವೃತ್ತಿಗೆ ಹೆದರಿದ ಜಪ್ಪ "ಏನಿಲ್ಲಪ್ಪ" ಎಂದ. ಆದರೂ ಜಪ್ಪು ತನಗೊಬ್ಬ

ಅಣ್ಣನೋ – ತಮ್ಮನೋ – ಸಹೋದರಿಯೋ ಇದ್ದಿದ್ದರೆ ಅವರೊಡನೆಯಾದರೂ ಪತ್ರಿಕೆಯ ಕವಿತೆಯ ಸ್ವಾದವನ್ನು ಹಂಚಿಕೊಳ್ಳಬಹುದಿತ್ತು ಎಂದು ಹಳಹಳಿಸಿದ. ತಾಯಿ ಊಟಕ್ಕೆ ಕರೆದಾಗ ಮೆಲುದನಿಯಲ್ಲಿ ತಾಯಿಯೊಡನೆ "ಅಮ್ಮಾ.... ಈ ವಾರ ಕೂಡ ಪ್ರಾರ್ಥನಾಳ ಕವಿತೆಯೊಂದು ಬಂದಿದೆ ಪತ್ರಿಕೆಯಲ್ಲಿ, ಎಷ್ಟು ಚೆನ್ನಾಗಿದೆ ಗೊತ್ತಾ ..." ಎಂದು ಹೇಳಿದ.

"ನೀನೊಬ್ಬ ಹುಚ್ಚ.... ಅವಳು ಏನು ಬರೆದರೂ ನಿನಗೆ ಚೆನ್ನ" ಎಂದು ತಾಯಿ ನಕ್ಕರು. ಸಿಡಿಮಿಡಿಗೊಂಡ ಜಪ್ಪು "ಕವನ ಅರ್ಥವಾಗಲಿಲ್ಲ ಎಂದಾದರೆ ನೇರವಾಗಿ ಹೇಳು. ಸುಮ್ಮನೆ ಅವಳ ಕವನವೆಲ್ಲ ನನಗೆ ಚೆನ್ನ ಎಂದೂ ಕೆಣಕಬೇಡ" ಎಂದು ರೇಗಿದ. ತಾಯಿ ನಕ್ಕರು ಸುಮ್ಮನೆ.

ಅಂದು ರಾತ್ರಿ ಪುನಃ ಪುನಃ ಆ ಕವನವನ್ನೋದಿದ ಜಪ್ಪು. ಯಾರು ಈ ಪ್ರಾರ್ಥನಾ ಎಂದು ಯೋಚನೆಯಾಯ್ತು ಅವನಿಗೆ. ಕೊಡವ ಭಾಷೆಯ ಮೇಲಿನ ಪ್ರಭುತ್ವ ಗಮನಿಸಿ ಈಕೆ ಕೊಡವತಿಯೇ ಎಂಬುದು ಪ್ರಬಲವಾಯ್ತು. ಎಂದಾದ ರೊಂದು ದಿನ ಅವಳನ್ನು ಸಂಧಿಸಲೇ ಬೇಕೆಂದು ನಿರ್ಧಾರ ತಳೆದ. ಅದೇ ಯೋಚನೆ ಯಲ್ಲಿ ನಿದ್ರೆಹೋದ.

* * * *

"ನಮಸ್ಕಾರ ಸರ್...."

ಪತ್ರಿಕೆಯ ಸಂಪಾದಕರು ಈ ಧ್ವನಿಯ ಕೇಳಿದವರೆ ತಲೆ ಎತ್ತಿ ಧರಿಸಿದ ಕನ್ನಡಕ ದೊಳಗಿಂದಲೇ ಜಪ್ಪುನನ್ನೊಮ್ಮೆ ನೋಡಿ "ಓಹೋಹೋ ನಮಸ್ಕಾರ.... ಬನ್ನಿ.... ಬನ್ನಿ... ಕುಳಿತುಕೊಳ್ಳಿ" ಎಂದು ಆದರದಿಂದ ಕರೆದರು.

ಜಪ್ಪು ಸಂಪಾದಕರು ತೋರಿಸಿದ ಕುರ್ಚಿಯಲ್ಲಿ ಕುಳಿತುಕೊಳ್ಳುವದರೊಳಗೆಯೆ ಸಂಪಾದಕರು ಪುನಃ ತಮ್ಮ ಬರವಣಿಗೆಯಲ್ಲಿ ಮುಳುಗಿ ಹೋಗಿದ್ದರು – ಮೌನ ಕೊರೆಯತೊಡಗಿತ್ತು. ಕುಳಿತು ಸಾಕಾಗಿ ಜಪ್ಪು ಸಂಪಾದಕರ ಗಮನ ಸೆಳೆಯಲು ಕೆಮ್ಮಿದ. ಟೇಬಲನ್ನೇ ಮೆಲುವಾಗಿ ಬಡಿದ ಬೆರಳುಗಳಿಂದ. ಆದರೆ ಸಂಪಾದಕರ ತಲೆ ಮೇಲೇಳಲೇ ಇಲ್ಲ. ಕೊನೆಗೆ ಸಾssರ್ ಎಂದ.

ಸಂಪಾದಕರು ತಲೆ ಎತ್ತಿದರು ಆಗ. ಏನಾಗಬೇಕಿತ್ತು ಎಂಬ ಭಾವ ಮಾತ್ರ ಮುಖದಲ್ಲಿ ತೋರಿದರೇ ವಿನಃ ಮಾತನಾಡಿರಲಿಲ್ಲ.

"ನಿಮ್ಮದು ಬರೆದು ಮುಗಿದಿದ್ದರೆ ಸ್ವಲ್ಪ ಮಾತಿತ್ತು" ಜಪ್ಪು ತೊದಲಿದ. ನೆಟ್ಟಗೆ ಕುಳಿತ ಸಂಪಾದಕರು ಸನ್ನೆಯಿಂದಲೇ ಹೇಳಿ ಎಂದರು.

"ನಿಮ್ಮ ಪತ್ರಿಕೆಯ ಅಭಿಮಾನಿ ನಾನು ಸಾರ್. ಒಬ್ಬ ಖಾಯಂ ಓದುಗ." ಸಂಪಾದಕರ ಮೋರೆಯಲ್ಲಿ ನಿರ್ಭಾವವಿತ್ತು.

ಜಪ್ಪು ಮುಂದರಿಸಿದ "ಅದರಲ್ಲೂ ಕುಮಾರಿ ಪ್ರಾರ್ಥನಾರ ಕವನ-ಕತೆಗಳಂತೂ ಫೆಂಟಾಸ್ಟಿಕ್ ಸಾರ್. I like them greately" ಧೈರ್ಯದಿಂದ ಜಪ್ಪು ಬಣ್ಣಿಸ ತೊಡಗಿದಂತೆ ಸಂಪಾದಕರ ಮುಖ ಕಮಲದಲ್ಲಿ ನಗೆಯ ಸಂಳಿ ಅರಳತೊಡಗಿತ್ತು.

"ಸರಿ...ನನ್ನಿಂದೇನಾಗಬೇಕು ಈಗ" ಎಂದು ಸಂಪಾದಕರು ಕೇಳುತ್ತಿರುವಂತೆಯೇ ಜಪ್ಪುವಿಗೆ ಅಸಾಧ್ಯ ಸಿಟ್ಟು ತಲೆಗೇರಿತ್ತು. ಆದರೂ ಸಾವರಿಸಿಕೊಳ್ಳುತ್ತ "ಪ್ರಾರ್ಥನಾ ಳಿಗೆ ನನ್ನ ವೈಯಕ್ತಿಕ ಅಭಿನಂದನೆಗಳನ್ನು ಹೇಳಬೇಕು, ಅವಳ ವಿಳಾಸವನ್ನು ನೀವು ದಯಮಾಡಿ ಒದಗಿಸಿದರೆ...." ಎಂದು ವಿನಯದಿಂದ ವಿನಂತಿಸಿದ.

ಕನ್ನಡಕದೊಳಗಿಂದಲೇ ತೀಕ್ಷ್ಣವಾಗಿ ನೋಡಿದ ಸಂಪಾದಕರು "ನಿಮ್ಮ ಅಭಿ ನಂದನೆ ಏನು ಎಂಬುದನ್ನು ಬರೆದುಕೊಟ್ಟರೆ ನಾನದನ್ನು ಪ್ರಕಟಿಸುತ್ತೇನೆ" ಎಂದನ್ನುತ್ತ ಅವನ ಸಡಗರವನ್ನು ತುಂಡುಗೈದರು.

"ಸಾರ್... ದಯಮಾಡಿ ವಿಳಾಸ ನೀಡಿ ಉಪಕರಿಸಿ. ನಾನೇ ಖುದ್ದಾಗಿ ಬರೆಯು ತ್ತೇನೆ. ಪ್ರಾರ್ಥನಾರಂತ ಲೇಖಕಿಯ ಪರಿಚಯವನ್ನು ಹೊಂದಿರುವುದು ಖುಷಿಯ ವಿಷಯ ನನಗೆ." ಜಪ್ಪುವಿನ ವಿನಂತಿಗೆ ಬಗ್ಗದ ಸಂಪಾದಕರು "ನೋಡಪ್ಪ ಮೊದಲು ನಾನಿದರ ಕುರಿತು ಅವಳ ಒಪ್ಪಿಗೆ ಪಡೆಯಬೇಕು. ಅವಳೊಪ್ಪಿದ ನಂತರವೇ ಅವಳ ವಿಳಾಸ ಒದಗಿಸಬಹುದು. ಯಾವುದಕ್ಕೂ ನಿಮ್ಮ ವಿಳಾಸ ನನಗೆ ನೀಡಿರಿ" ಎಂದು ಕಡ್ಡಿ ತುಂಡಾದಂತೆ ನುಡಿದರು.

ಇದನ್ನು ಕೇಳಿ ಜಪ್ಪುವಿಗೆ ನಿರಾಸೆಯೆನಿಸಿತು. ವಿಳಾಸ ದೊರಕದೆ ಹಿಂತಿರುಗು ವುದೂ ಖೇದವೆನಿಸಿತು. ಬಂದ ದಾರಿಗೆ ಸುಂಕವಿರದೇ ಸಂಪಾದಕರ ಕೋಣೆಯಿಂದ ಹೊರಬಂದ. ಮನೆಗೆ ವಾಪಸಾಗಲೂ ಮನಬರದೇ ನೇರವಾಗಿ ಚಿತ್ರಮಂದಿರದತ್ತ ಸಾಗಿ ಟಿಕೇಟ್ ಖರೀದಿಸಿ ಒಳ ನುಗ್ಗಿದ.

ಯಾರಾದರೂ ಪರಿಚಯದವರು ಬಂದರೆ ಮೀಸಲಾಗಿರಲಿ ಎಂದೆಂದುಕೊಂಡು ತನ್ನ ಪಕ್ಕದ ಆಸನದ ಮೇಲೆ ತನ್ನ ಕೈಚೀಲವನ್ನಿಟ್ಟ. ಅತ್ತಿತ್ತ ಗಮನಿಸುತ್ತ ತೆಪ್ಪಗೆ ಕುಳಿತಿದ್ದ.

ಆಗ ಅಲ್ಲಿಗೆ ಬಂದ ಒಬ್ಬಳು ಸುಂದರ ಯುವತಿ "ಇದು ನಿಮ್ಮದೇ ಚೀಲವೆ? ಆಕ್ಷೇಪವಿರದಿದ್ದರೆ ನಾನು ಅಲ್ಲಿ ಕುಳಿತುಕೊಳ್ಳಬಹುದೆ" ಎಂದು ವಿನಂತಿಸಿದಾಗ ಜಪ್ಪು ವಿಗೆ ಪಿಚ್ಚೆನಿಸಿದರೂ ಏನೂ ಹೇಳಲಾಗದೆ ತನ್ನ ಕೈಚೀಲವನ್ನು ಸೀಟಿನ ಮೇಲಿಂದ ತೆಗೆಯುತ್ತ ತರುಣಿಗೆ ಕುಳಿತುಕೊಳ್ಳಲು ಅನುವು ಮಾಡಿದ.

ಸಿನಿಮಾ ಪ್ರಾರಂಭವಾದ ತುಸು ಹೊತ್ತಿನಲ್ಲಿಯೇ ಎಂತದೋ ಮೃದು ಸ್ಪರ್ಶ ಉಂಟಾದ ಅನುಭವವಾಯ್ತು ಜಪ್ಪುವಿಗೆ. ಜತೆಜತೆಗೆ ತನ್ನ ಕಾಲಿಗೆ ಕೈ ತಾಕಿದ ಅನುಭವ. ಹೆದರಿ ತನ್ನ ಕಾಲನ್ನೀಚೆ ಎಳೆದುಕೊಂಡ ಜಪ್ಪು. ಮುದುಡಿ ಕುಳಿತು ಕೊಂಡ. ರ್ಖುಗ್ಗನೆ ಬೆಳಕೂ ಸರಿಯಾಗಿ ಹೊತ್ತುಕೊಂಡಿತ್ತು ಸಿನಿಮಾ ಹಾಲಿನಲ್ಲಿ.

ಪಕ್ಕದ ಹುಡುಗಿ ಮೆತ್ತಗೆ ಜಪ್ಪುವನ್ನೇ ನೋಡುತ್ತ "ಯಾಕೆ ಹೆದರಿಕೊಂಡಿರುವಿರಿ – ಸರಿಯಾಗಿ ಕುಳಿತಿರಿ ಪರವಾಗಿಲ್ಲ" ಎಂದಾಗ ಬೆಚ್ಚಿದ ಜಪ್ಪು ನೇರವಾಗಿ ಕುಳಿತ.

"ನಿಮ್ಮ ಹೆಸರೇನು" ಹುಡುಗಿ ಕೇಳಿದಳು.

"ಜಪ್ಪು... ನಿಮ್ಮದು ?" ಎಷ್ಟು ಮೆತ್ತಗೆ ಹೇಳಿದನೆಂದರೆ ಅವನಿಗೇ ಅದು ಕೇಳಿಸಲಿಲ್ಲ.

"ಪ್ರಾರ್ಥನಾ"

"ಪ್ರಾರ್ಥನಾ.... ಪ್ರಾರ್ಥನಾ.... ಅರೆ! ಇವಳೇ ಯಾಕಿರಬಾರದು ನಾನು ಅರಸುತ್ತಿರುವ ಕವಿ ಹೃದಯಿ ಪ್ರಾರ್ಥನಾ" ಎಂದುಕೊಂಡ ಜಪ್ಪು ಮರುಕ್ಷಣವೆ ಛೇ ಇರಲಾರದು. ಇಷ್ಟೊಂದು ಸಣ್ಣ ವಯಸ್ಸಿನ ಯುವತಿ ಮೇಲ್ಮಟ್ಟದ ಕವಿತೆಗಳನ್ನು ಬರೆಯಲು ಸಾಧ್ಯವಿರಲಾರದು ಎಂದು ಅನುಮಾನ ಕೂಡ ಹೊಂದಿದ. ಆದರೂ ಅನುಮಾನ ಪರಿಹಾರಕ್ಕಾಗಿ "ನೀವು ಕಥೆ–ಕವನ ಬರೆಯುತ್ತೀರಲ್ಲ ಅದೇ ಪ್ರಾರ್ಥನಾ ತಾನೆ" ಎಂದು ಕೇಳಿದ.

ಆಶ್ಚರ್ಯದ ಸರದಿ ಆಗ ಕವಿಯಿತ್ರಿಗೊದಗಿತ್ತು. ಆದರೂ ತರುಣಿ "ಹ್ವಾ... ನಾನೇ ಕವಿಯಿತ್ರಿ ಪ್ರಾರ್ಥನಾ" ಎಂದಳು. ಜಪ್ಪುವಿನ ಖುಷಿ ಮುಗಿಲನ್ನೇ ತಲುಪಿತ್ತು. ತಾನು ಏನೆಲ್ಲ ಮಾತನಾಡಿ ಪ್ರಾರ್ಥನಾಳ ಬಳಿ ಶಬ್ದಗಳ ಮೂಟೆ ಕಟ್ಟಬೇಕೆನಿಸಿತ್ತೋ ಆ ಎಲ್ಲ ಶಬ್ದಗಳೂ ತಟಸ್ಥವಾಗಿ ಹೋದಂತೆ ಮೂಕನಾಗಿದ್ದ. ಆದರೂ ಹರಸಾಹಸದೊಡನೆ "ನೀವು ತುಂಬಾ ಚೆನ್ನಾಗಿ ಬರೆಯುತ್ತೀರಿ" ಎಂದು ಅಂದ.

ತರುಣಿ ನಗುತ್ತಾ "ಕೃತಜ್ಞತೆಗಳು" ಎಂದಂದಳು. ಮತ್ತೆ ಸಿನಿಮಾ ಪ್ರಾರಂಭವಾಯ್ತು. ಆದರೆ ಈಗ ತರುಣಿ ಗಂಭೀರಳಾಗಿದ್ದಳು. ಚೆಲ್ಲು ಚೆಲ್ಲಾಗಿ ವರ್ತಿಸದೆ ಸಿನಿಮಾ ನೋಡತೊಡಗಿದ್ದಳು.

ಅವಳ ಲಕ್ಷ್ಯ ಸೆಳೆಯುವ ಸರದಿ ಜಪ್ಪುವಿನದಾಯ್ತು ಈಗ.

"ನಿಮ್ಮೊಡನೆ ಕೆಲವು ವಿಷಯಗಳ ಕುರಿತು ಮಾತನಾಡುವುದಿದೆ ನನಗೆ, ಎಲ್ಲಿ ಸಿಗುತ್ತೀರಿ ನೀವು" ಎಂದು ಪ್ರಾರ್ಥನಾಳನ್ನು ಸಿನಿಮಾದ ನಡುವೆಯೇ ಕೇಳಿದ.

"ಏನು ? ಮಾತೆ ? ಇಲ್ಲೇ ಕೇಳಿ..." ಎಂದು ಮಾರ್ನುಡಿದರು ಅವಳು.

"ಇಲ್ಲ ... ಇಲ್ಲ.... ಇಲ್ಲಲ್ಲ... ಆ ಮಾತುಗಳನ್ನಾಡಲು ಇದು ಸೂಕ್ತ ಸ್ಥಳವೂ ಅಲ್ಲ. ಸಂದರ್ಭವೂ ಅಲ್ಲ" ಎಂದಂದ ಜಪ್ಪು.

ಕೊಂಚ ಯೋಚಿಸಿ "ಸರಿ ನಾಳೆ ಸಂಜೆ ಐದಕ್ಕೆ ರಾಜಾ ಸೀಟ್ ಬಳಿ ಬನ್ನಿ. ಅಲ್ಲಿ ನಾನಿರುವೆ" ಎಂದಳು.

* * * *

"ಪ್ರಾರ್ಥನಾ.... ಇಂದಿನ ವಾತಾವರಣ ತುಂಬಾ ಚೆನ್ನಾಗಿದೆ ಅಲ್ವಾ ? ರಾಜಾ ಸೀಟ್ ಪರಿಸರ ಎಂದೂ ಸುಂದರವೆ. ಆದರೂ ಇವತ್ತಿನ ಸೊಬಗು ಬೇರೆಯದೇ ಥರಾ.... ಎಷ್ಟು ಚೆಂದ ನೋಡಿ."

"ಇದನ್ನೇ ನುಡಿಯಲು ನನ್ನನ್ನಿಲ್ಲಿ ಕರೆದಿದ್ದಾ ?" ಪ್ರಾರ್ಥನಾ ನಗುತ್ತಾ ಕೇಳಿದಳು.

"ಪ್ರಾರ್ಥನಾ ನಿಮ್ಮ ಜತೆ ತುಂಬಾ ಮಾತನಾಡಬೇಕೆನಿಸಿ ಬಂದೆ. ಆದರೆ ಈಗ ಏನು ಮಾತನಾಡಲಿ ಎಂಬುದೇ ಸಮಸ್ಯೆ. ಶಬ್ದಗಳೇ ಸಿಗದ ಪರಿಸ್ಥಿತಿ ನನಗೆ" ಎಂದು ಜಪ್ಪು ಸಂಕಟಪಟ್ಟ.

ಜೋರಾಗಿ ನಗು ಬಂತು ಪ್ರಾರ್ಥನಾಳಿಗೆ. ನಕ್ಕಳು.... "ಹೇಳಿ.... be bold... ಹೇಳಬೇಕೆಂಬುದನ್ನು ಸಂಕೋಚವಿರದೆ ತಿಳಿಸಿ ಪ್ಲೀಸ್" ಎಂದು ಧೈರ್ಯ ತುಂಬಿದಳು.

"ನಾನು ನಿಮ್ಮನ್ನು ಪ್ರೀತಿಸುತ್ತೇನೆ ಪ್ರಾರ್ಥನಾ.... I love you" ಜಪ್ಪು ಬಡಬಡಿಸಿದ. ಪ್ರಾರ್ಥನಾ ಮಾತ್ರ ಜಪ್ಪುವಿನ ಬೇಡಿಕೆಗೆ ನಿರಾಸಕ್ತಿಯನ್ನೇ ತೋರಿದಳು.

"ನೋಡಿ ಜಪ್ಪು... ನನ್ನ ವಿಷಯ ತಿಳಿದರೆ ನೀವು ನನ್ನನ್ನು ಖಂಡಿತ ಪ್ರೀತಿಸಲಾರಿರಿ. ನನ್ನ ವೇಷ ಭೂಷಣಗಳಿಂದ ನಾನೋರ್ವ ಶ್ರೀಮಂತ ತರುಣಿ ಎಂದು ತಿಳಿದರೆ ಅದು ತಪ್ಪು. ಹಾಸಿಗೆಯಾಳಾದ ನನ್ನ ತಾಯಿ ಸದಾ ರೋಗಿ. ಹೊಟ್ಟೆ ತುಂಬ ಬೇಕಾದರೆ ಕೆಲಸ ಬೇಕು. ತಾಯಿಯ ಔಷಧಕ್ಕೆ ಹಣ ಬೇಕು. ಎಲ್ಲವೂ ಬೇಕು. ಆದರೆ ಹೇಗೆ ಬೇಕಾದುದನ್ನೆಲ್ಲ ತರುವುದು ? ಗೊತ್ತೆ ನಿಮಗೆ – ನಾನು ಬೇಕಾದುದೆಲ್ಲವನ್ನೂ ತರುವುದು ಮೈಮಾರಿಯೇ. ನಾನೊಬ್ಬಳು ಕಾಲ್‌ಗರ್ಲ್. ಇಂದು ಒಬ್ಬನ ಜತೆ ಹಾಸಿಗೆಯಲ್ಲಿ ಮಲಗಿದರೆ... ನಾಳೆ ಮತ್ತೊಬ್ಬನ ಜತೆ... ಹೇಳಿ.... ಹೇಳಿ.... ಈಗಲೂ ನಿಮಗೆ ನಾನು ಬೇಕೆನಿಸುತ್ತಿದೆಯೆ ?" ಗದ್ಗದಿತಳಾಗಿ ಪ್ರಾರ್ಥನಾ ಕೇಳತೊಡಗಿದಳು.

ತುಸು ಹೊತ್ತು ಸುಮ್ಮನಿದ್ದ ಜಪ್ಪು. ನಂತರ ನಿರ್ಧಾರದ ಧ್ವನಿಯಲ್ಲಿ "ನೀನು ನನ್ನ ಮನ ಮಂದಿರದ ಪವಿತ್ರ ಪ್ರಾರ್ಥನಾ ಮಾತ್ರ ಆಗಿದ್ದೀಯಾ. ನಿನ್ನ ಇತಿಹಾಸವನ್ನು ನಾನು ಬರೆಯಲಾರೆ. ನನಗೆ ನೀನು ಬೇಕು ಪ್ರಾರ್ಥನಾ" ಎಂದು ನುಡಿದ.

"ನೋಡಿ ಯೋಚಿಸಿ ಮತ್ತೊಮ್ಮೆ" ಎಂದು ಪ್ರಾರ್ಥನಾ ಬೇಡಿಕೊಂಡಳು.

"ನನ್ನ ನಿರ್ಧಾರ ಅಚಲವಾದುದು" ಜಪ್ಪುವಿನ ಧ್ವನಿ ಕಂಪಿಸ ತೊಡಗಿತ್ತು.

*

ಮನೆಗೆ ಬಂದ ಜಪ್ಪು ತಾಯಿಯೊಡನೆ ಪ್ರಾರ್ಥನಾಳ ಕುರಿತು ಸವಿವರವಾಗಿ ತಿಳಿಸಿ "ನಾನು ಅವಳೊಡನೆ ಮದುವೆಯಾಗುವುದು ತಂದೆಯನ್ನು ನೀನು ಒಪ್ಪಿಸಬೇಕು" ಎಂದು ಬೇಡಿಕೊಂಡ.

ಇರುವ ಒಬ್ಬನೇ ಮಗನ ಒಳಿತಿಗಾಗಿ–ಅವನಿಚ್ಛೆಯಂತೆ ನಡೆಯಲೆಂದು ತಂದೆ ತಾಯಿಗಳಿಬ್ಬರೂ ಮಗನ ಇಷ್ಟಕ್ಕೆ ವಿರೋಧ ವ್ಯಕ್ತಪಡಿಸಲಿಲ್ಲ. ಮದುವೆಗೆ ಒಪ್ಪಿದ್ದರು.

ಆದರೆ ಪ್ರಾರ್ಥನಾಳ ಪರಿಸ್ಥಿತಿ ಬೇರೆಯದೇ ಆಗಿತ್ತು. ಕ್ರೂರವಾದ ಇತಿಹಾಸ

ವನ್ನು ಮರೆತು ಸುಂದರವಾದ ಭವಿಷ್ಯದ ಹಾದಿಯನ್ನು ನಿರೀಕ್ಷಿಸಿದ ಅವಳಿಗೆ ವಿಧಿ ಹಾಗಾಗಗೊಡಲಿಲ್ಲ. ತೀವ್ರವಾದ ಜ್ವರ ಬಾಧಿಸತೊಡಗಿತು ಅವಳನ್ನು.

ಡಾಕ್ಟರರಲ್ಲಿ ತಪಾಸಣೆ ನಡೆಯಿತು ಕೂಡ. ರಕ್ತ ಪರೀಕ್ಷೆ ಕೂಡ ನಡೆಯಿತು. ಡಾಕ್ಟರ್ ರಿಪೋರ್ಟ್ ಓದಿ ತಿಳಿಸಿದಾಗ ಆಘಾತವೇ ಆಯ್ತು ಪ್ರಾರ್ಥನಾಳಿಗೆ. ಪ್ರಾರ್ಥನಾಳ ಸುಂದರ ಕಾಯವನ್ನು ಸಿಫಿಲಿಸ್ ವ್ಯಾಧಿ ಆಕ್ರಮಿಸಿತ್ತು.

ತನಗೆ ಗುಪ್ತರೋಗ ಅಂಟಿದೆ – ತನ್ನ ಪಾಪದ ಜೀವನದ ದುಷ್ಟ ಬೇರು ತನ್ನಲ್ಲಿ ಆಳವಾಗಿ ಬೇರೂರಿದೆ ಎಂಬುದು ಪ್ರಾರ್ಥನಾಳಿಗೆ ತಿಳಿದಾಗ ಅವಳ ಆಲೋಚನೆಯೇ ಬೇರೆಯಾಯ್ತು. ತನ್ನ ಪಾಪದ ದೇಹವನ್ನು ಜಪ್ಪುವಿನಂಥ ಮುಗ್ಧ ಯುವಕನಿಗೆ– ಪ್ರೇಮ ತಪಸ್ವಿಗೆ ಒಪ್ಪಿಸಬಾರದು ಎಂದು ನಿರ್ಧರಿಸಿದಳು.

ಹೌದು... ! ಪ್ರಾರ್ಥನಾ ಆತ್ಮಹತ್ಯೆ ಮಾಡಿಕೊಂಡಿದ್ದಳು.

ವಾರಪತ್ರಿಕೆಯಲ್ಲಿ ಈ ಸುದ್ದಿಯನ್ನೋದಿದಾಗ ಜಪ್ಪುವಿನ ಹೃದಯ ಬಡಿತವೇ ನಿಂತಂತಾಗಿತ್ತು.

ಪ್ರಾರ್ಥನಾಳ ಕೊನೆಯ ಕವಿತೆಯೂ ಅವಳ ಮರಣದ ಸುದ್ದಿಯೊಂದಿಗೇ ಪ್ರಕಟಗೊಂಡಿತ್ತು.

"ನಿನ್ನ ಬದುಕಿಂದ ನಾ ದೂರ ಹೋಗುತ್ತಿರುವೆ
ಮನ್ನಿಸೂ ನನ್ನ ಹೃದಯಾ ರವಿ – ಓ ಕರುಣಾಳುವೆ

ಕಾಲನು ಕರೆದಿರುವಾ
ಹೊಂದಿರು ನೀ ಸಂಯಮವಾ

ಸ್ವರ್ಗದ ಬಾಗಿಲೊಳು
ನಾ ಕಾಯುವೆ ನಿನ್ನನನುದಿನವೂ
ಬಾಳಿ ಬದುಕ ನೀ ಬಾ ಕಾದಿಹುದೆನ್ನ ತನುವು"

ಜಪ್ಪುವಿನ ಹೃದಯ ಚೀರತೊಡಗಿತ್ತು ಕವಿತೆಯನ್ನೋದಿ.

## ಹೆಣ್ಣು....

ಮೂಲ (ಕೊಡಗು) : ಕೂತಂಡ ಪಾರ್ವತಿ
ಅನು : ಮೀನಾ ಕೊಡ್ಲೆಕೆರೆ

ನಾಚಿಕೆಯ ತೆಳು ಬಲೆಯನ್ನೇಕೆ
ಹೊದಿಸಿದಿರಿ
ಮಾನ ಕೆಡಿಸುವಿರಿ ಕೀಳು ಜನ್ಮವೆಂದಂದು
ಮರೆಯಂದಿರಿ ಗರ್ಭ
ನವಮಾಸ ರಕ್ತದ ಕಡಲ ತೆರೆ ತೊರೆ
ತೊನೆಯುವ ಪೈರು
ಹಾಲಂಣಿಸಿ ಬೆಳೆಸಿದ ಅವಳ ಕರುಣ ಕಥೆ

ನಿಮ್ಮ ನಿದ್ದೆಯಂ ತೊಟ್ಟಿಲ ತೂಗಿ
ಕವನಗಳ ದಂಡೆ ಹಾಡಿಗೆ ಮಲಗಿ
ಕೈಹಿಡಿದು ನಡಿಗೆ ಕಲಿಸಿದ
ಅಕ್ಷರದ ಅಕ್ಷಯುವ ಕೊಟ್ಟವಳು ಹೆಣ್ಣು.

ಶೂರ ಧೀರರ ಕತೆ ಹೇಳಿ
ಬದುಕಿನ ವಿಧ ವಿವಿಧ ಹಾಡಿನ ಬೆಡಗು
ಬಿತ್ತರಿಸಿ
ಧೈರ್ಯದ ನುಡಿ ಬೀಜದ ಮೊಳಕೆ
ಮೊಳೆಸಿದ ಜೀವ ನದಿ ಹೆಣ್ಣು

ಈ ಪರ್ವತಸ್ತನೆ
ಹೂ ಹಣ್ಣು ಎದೆ
ಗಗನ ನಿಬ್ಬೆರಗಿನ ಕಣ್ಣು ತಾರೆ
ಭೂ ಜಲ ವಾಯುವಿನ ಬ್ರಹ್ಮಾಂಡ
ಎಲ್ಲವೂ ಹೆಣ್ಣು

ಹೆಣ್ಣು....
ಸ್ಥಾವರಕೆ ಕಣ್ಣು
ಜಂಗಮಕೆ ಹಣ್ಣು
ತೆರೆದಿಡಬೇಡಿ ನಿಮ್ಮ ಹುಳುಕನ್ನು
ಗೌರವಿಸಿ ತಾಯಂದಿರನ್ನು.

# ಮರೆಯಾದವಳಿಗೆ

---

ಮೂಲ (ಕೊಡಗು) : ಪುಟ್ಟ ಪೆಮ್ಮಯ್ಯ
ಅನು : ವೀಣಾ ಕೊಡ್ಲೆಕೆರೆ

ಬಾಳ ರಥ ಮಂದಾರ
ಹೂವನರಳಿಸಿ
ಎಳಿದವಳು
ಇನ್ನಿಲ್ಲ....
ನಂಬಲಾಗುತ್ತಿಲ್ಲ....

ತಾವರೆಯಂ ಮುಖವಿಲ್ಲ
ನಾನು ಸೂರ್ಯನಾದರೇನು
ಫಲ ಹೇಳು
ಕವಿತೆಯು ಬರೆದರೇನು ಬಂತು
ನಿನ್ನ ನಿರ್ಯಾಣ
ಶೂನ್ಯವಾಗಿಸಿದೆ ನನ್ನ ಬಾಳಂ.

ನಿನ್ನ ಮುಖ ತಾವರೆ ಇಲ್ಲ
ತುಟಿ ಕೆಂಪು ಗುಲಾಬಿ ಎಸಳುಗಳಿಲ್ಲ
ಈಗಿರುವ ವಾಸ್ತವದಲ್ಲಿ
ಚುಚ್ಚುವ ಮುಳ್ಳುಗಳು ಮಾತ್ರ.

ನೀ ಗರ್ಭದ ಕರುಳ ರಕ್ತವ ಬಸಿದು
ನೀಡಿದ ಮಗಳು
ಬೆಳೆಯುತಿಹಳು
ಅಳುವಳು – ಆವರಿಸಿದ ಇರುಳು

ನಿನ್ನ ನೆನಪೇ ಹೊಳೆಯುವ
ನಕ್ಷತ್ರ ಕೋಟಿ
ರಾಗವಾಗಿದೆ ನನಗೀಗ ಎದೆ ತಂಬೂರಿ ಮೀಟಿ

ನಿನ್ನಮ್ಮ ನೋಡೆಂದು
ಬಾನ ತಾರೆಯ ಮುಖವನ್ನೇ
ತೋರುತಿಹೆ ನಾನು
ನಿನ್ನ ಮಗಳಿಗೆ ಇಲ್ಲಿ
ಸುಖವಾಗಿರು... ಬರುವೆ... ಬರುವೆ
ಬಂದೇ ಬರುವೆ ನಿನ್ನಲ್ಲಿ
ದಯಮಾಡಿ ಕೊರಗದಿರು ಅಲ್ಲಿ

## ಈ ಸಂಚಿಕೆಯ ಲೇಖಕರು

---

1 ನಟರಾಜ್ ಹುಳಿಯಾರ್
ನಂ. 74, ಮಹಡಿ,
1ನೇ ಕ್ರಾಸ್, 4ನೇ ಮುಖ್ಯರಸ್ತೆ,
ಪದ್ಮನಾಭನಗರ
ಬೆಂಗಳೂರು–560 070

2 ಶೋಭ ವಾರಿಯರ್
107, 'ಭವನ'
ಜವಾಹರ ನಗರ
ಕಡವಂಟ ಪೋಸ್ಟ್
ಕೊಚ್ಚಿ – 682020

3 ಶರ್ವಾಣಿ ಕೇರಾಫ್ ಎನ್. ರವಿ
ಇಂಡಿಯನ್ ಬ್ಯಾಂಕ್,
ಲೆಮಿಂಗ್‌ಟನ್ ರಸ್ತೆ
ಹುಬ್ಬಳ್ಳಿ – 580020

4 ಗೊರೂರು ಶ್ರೀನಿವಾಸಮೂರ್ತಿ
435, ಸೆಕ್ಟರ್ 14, ಗುರಗಾವ್
ಹರಿಯಾಣ – 122001

5 ನಾಗಣ್ಣ
ಟಿ–52, ಉಪಾಧ್ಯಾಯರ ನಿವಾಸಗಳು
ಮಾನಸ ಗಂಗೋತ್ರಿ
ಮೈಸೂರು – 570006

6 ಎನ್. ಎಸ್. ಶಾರದಾ ಪ್ರಸಾದ್
ಭಾಷಾಂತರಕಾರ
ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ
ಮೈಸೂರು ವಿಶ್ವವಿದ್ಯಾಲಯ
ಮೈಸೂರು – 570006

7 'ಘಟ್ಟಮರಾಜು'
ಜಿ. ಅಶ್ವತ್ಥ ನಾರಾಯಣ
53, ನೇತಾಜಿ ರಸ್ತೆ
2ನೇ ಬ್ಲಾಕ್, ತ್ಯಾಗರಾಜನಗರ
ಬೆಂಗಳೂರು–560028

8 ಎ. ಎಮ್. ದೇವಿ
ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ
ಮೈಸೂರು – 570006

9 ಎ. ಆರ್. ನಾಗಭೂಷಣ
1235, ಕೆ. ಎಮ್. ಪುರಂ
ಮೈಸೂರು – 570004

10 ವೀಣಾ ಕೊಡ್ಲೆಕೆರೆ
ರಮ್ಯ, ದಾಸಪ್ಪ ಛತ್ರದ ಎದುರು
ಗವಿಪುರಂ (ಪಶ್ಚಿಮ)
ಬೆಂಗಳೂರು – 560019

11 ಐ. ಎಮ್. ಧನು (ಸವ್ಯಸಾಚಿ)
ಬಿಳುಗುಂದ ಅಂಚೆ
ವಯಾ ಅಮ್ಮತ್ತಿ
ಕೊಡಗು ಜಿಲ್ಲೆ

12 ಬಿ. ಎಮ್. ಮಿಂಟ್ಟು ಪೂಣಚ್ಚ
ಪೆರೂರು ಗ್ರಾಮ
ಬಲ್ಲಮಾವಟಿ–ಅಂಚೆ
ಕೊಡಗು ಜಿಲ್ಲೆ–571214

13 ಬಿ. ಪಿ. ಕಾಳಪ್ಪ (ಪುಟ್ಟ ಪೆಮ್ಮಯ್ಯ)
ಕೋ ಆಪರೇಟೀವ್ ಸೊಸೈಟಿ
ಕೊಯಂಬತೂರ್ ಕಾಲೋನಿ
ಹುಣಸೂರು–571189

14 ವೆಂಕಟಾಚಲ ಹೆಗ್ಡೆ
ಸಂಪಾದಕ 'ಅಭಿವಂತ'
ದೆಹಲಿ ಕರ್ನಾಟಕ ಸಂಘ
ರಾವ್ ತುಳಾರಾಮ್ ಮಾರ್ಗ್
ಸೆಕ್ಟರ್–12
ಆರ್. ಕೆ. ಪುರಂ
ಹೊಸ ದೆಹಲಿ–110022

15 ಕೆ. ಶಿವಾರೆಡ್ಡಿ
6–1–711
ಖೈರತಾಬಾದ್
ಹೈದರಾಬಾದ್–4

16 ಬಿ. ಸಿ. ರಾಮಚಂದ್ರಶರ್ಮ
ಪರಾಶರ, 222, 39ನೇ 'ಸಿ' ಕ್ರಾಸ್
5ನೇ ಬ್ಲಾಕ್, ಜಯನಗರ
ಬೆಂಗಳೂರು–560011

ಸಂ. 3-3
ಅಕ್ಟೋಬರ್ 1990 – ಡಿಸೆಂಬರ್ 1990

# ಅನಿಕೇತನ

ಇದು ಕನ್ನಡೇತರ ಸಾಹಿತ್ಯ ಪರಿಚಯಕ್ಕೆ
ಮೀಸಲಾದ ತ್ರೈಮಾಸಿಕ

ಸಂಪಾದಕರು :

ಬಿ. ವೈ. ಲಲಿತಾಂಬ
ಡಾ. ಆರ್ವಯುಸ್. ಸುಂದರಂ
ಡಾ. ಎಚ್. ಎಸ್. ವೆಂಕಟೇಶ ಮೂರ್ತಿ

ಚಂದಾ ಹಣವನ್ನು ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ನಂ. 14/3-ಅ,
ನೃಪತುಂಗ ರಸ್ತೆ, ಬೆಂಗಳೂರು–560 002 ಇವರಿಗೆ ಕಳುಹಿಸಬೇಕು.